# ಸೂರ್ಯಪಾನ

( ಕವನಸಂಕಲನ )



ಅಂಬಿಕಾತನಯದತ್ತ



ಸಮಾಜ ಪುಸ್ತಕಾಲಯ,
ಧಾರವಾಡ.

ಮುದ್ರಕರು:
**ಭಾಲಚಂದ್ರ ಘಾಣೇಕರ**
ಪ್ರತಿಭಾ ಮುದ್ರಣ
ಧಾರವಾಡ.



ಪ್ರಥಮ ಮುದ್ರಣ ೧೯೫೬

**ಬೆಲೆ: ಎರಡು ರೂಪಾಯಿ**



ಪ್ರಕಾಶಕರು:
ಭಾಲಚಂದ್ರ ಘಾಣೇಕರ
**ಸಮಾಜ ಪುಸ್ತಕಾಲಯ**
**ಧಾರವಾಡ**

# ಮುನ್ನುಡಿ

'ಸೂರ್ಯಪಾನ'ವು ಅರುವತ್ತರ ಅರುಳುಮರುಳಿನ ಆದಿಯಲ್ಲಿ ಪ್ರಕಟವಾಗುತ್ತಿದೆ. ಅರುವತ್ತು ಪದ್ಯಗಳನ್ನು ಒಳಗೊಂಡಿದೆ. ನನ್ನ ತರುಣ ಮಿತ್ರರಾದ ಶ್ರೀ. ಭಾಲಚಂದ್ರ ಘಾಣೇಕರ ಇವರ ನಿರ್ಮಲ ಉತ್ಸಾಹದಿಂದ ಈ ಕೃತಿ ಇಷ್ಟು ತವಕದಲ್ಲಿಯೂ ಅಂದಪಡೆದೇ ಮುದ್ರಿತವಾಗಿದೆ. ಚಿ. ವಾಮನ ಬೇಂದ್ರೆ, ದಿವಾಣಜಿ, ಶಕುಂತಲಾ ಕೆರೂರ ಇವರ ನೆರವು ಅನೇಕ ವಿಧವಾಗಿ ಆಗಿದೆ. ಗೆಳೆಯರಾದ ಪ್ರಲ್ಹಾದ ನರೇಗಲ್ಲ, ಲಕ್ಷ್ಮಣರಾವ ಬೇಂದ್ರೆ, ಶ್ರೀ. ಗೋಕಾಕ ಇವರ ಸಲಹೆಗಳು ಇದಕ್ಕೆ ಈ ರೂಪ ಕೊಟ್ಟಿವೆ. ಪ್ರಿಯ ಮಲ್ಲಾರಿ ಮೇವುಂಡಿ ಇವರ ಎಚ್ಚರಿಕೆಯಿಂದ ಶುದ್ಧ ಪಾಠ ಉಳಿದುಕೊಂಡಿದೆ.

ಜೀವನ, ಜಯಂತಿ, ಜಯ ಕರ್ನಾಟಕ, ಪ್ರಬುದ್ಧ ಕರ್ನಾಟಕ ಈ ಪ್ರಮುಖ ಸಾಹಿತ್ಯ ಪತ್ರಿಕೆಗಳಲ್ಲದೆ, ಕೆಲವು ವಿಶೇಷ ಸಂಚಿಕೆಗಳ ಸಂಪಾದಕರು ಈ ಸಂಗ್ರಹದೊಳಗಿನ ಕೆಲ ಕವನಗಳನ್ನು ಈ ಮೊದಲು ಪ್ರಕಾಶಪಡಿಸಿ ಮಾಡಿದ ಉಪಕಾರಕ್ಕಾಗಿ ಅವರ ಸ್ಮರಣೆ ಮಾಡುತ್ತಿದ್ದೇನೆ. 'ಆಕಾಶವಾಣಿ'ಯ ಕೃಪೆಯಿಂದಲೂ ಗಾಳಿಯಲ್ಲಿ ಬಿತ್ತರಗೊಂಡ ಕೆಲವು ಕವನಗಳು ಇಲ್ಲಿವೆ. ಅವರ ಆಭಾರವನ್ನೂ ಮನ್ನಿಸುತ್ತೇನೆ. ಹೋದ ಹನ್ನೆರಡು ವರ್ಷಗಳಲ್ಲಿ ವಿಶೇಷವಾಗಿ ಬರೆದ ಈ ಕವನಗಳಲ್ಲಿ ಪ್ರತಿಭೆಯ ಯಾವ ಮುಖವನ್ನು, ದರ್ಶನ ವಿಲಾಸವನ್ನು ರಸಿಕರು, ಸಹೃದಯರು, ಕದಾಚಿತ್ ವಿಮರ್ಶಕರು ಕಾಣುವರೋ ಅದನ್ನು ನಾನು ಮುಂಚಿತವಾಗಿಯೇ ಸಾರುವದಾದರೂ ಹೇಗೆ? ಇಳಿವಯಸ್ಸಿನ ಅಶಕ್ತತೆಯ ಹೆಜ್ಜೆಗುರುತು ಅದರಲ್ಲಿಲ್ಲ ಎಂದು ನನಗೆ ತೋರುತ್ತದೆ! "**ಭಾಗ್ಯಾಯತ್ತಂ ಅತಃಪರಂ ನ ಖಲು ತತ್ ವಾಚ್ಯಂ ವಧೂ ಬಂಧುಭಿಃ.**"

ಧಾರವಾಡದಲ್ಲಿಯೇ ಪ್ರಸಿದ್ಧವಾಗಬೇಕಾಗಿದ್ದ 'ಗಂಗಾವತರಣ'ವು ಸೊಲ್ಲಾಪುರಕ್ಕೆ ಬಂದ ಮೇಲೆ ಪ್ರಕಾಶಿತವಾಯಿತು—ಇಲ್ಲಿಯೆ ಬರೆದ ಕೆಲ ಕವನಗಳಿಂದೊಡಗೂಡಿ. ಹನ್ನೆರಡು ವರ್ಷಗಳಲ್ಲಿ ಗೆಳೆಯರ ಸ್ನೇಹದಿಂದ, ಧಾರವಾಡದ ತಾಯಿಯ ಒಲವಿನಿಂದ, ಬಾನುಲಿಯ ಸೌಜನ್ಯದಿಂದ, ಧಾರವಾಡ ಸೀಮೆಯ ಸಂಬಂಧವು ಅಖಂಡಿತವಾಗಿ ಉಳಿದು, ಬೆಳೆದು ಬಂದಿದೆ.

ಅಂತೆಯೆ 'ಸೂರ್ಯಪಾನ' ವು ನಾನು ಇಲ್ಲಿರುವಾಗಲೇ ಪ್ರಕಾಶಿತವಾಗುತ್ತಿದ್ದರೂ ಧಾರವಾಡದ ಕರೆಯು ಅತ್ತ ಕರೆಯುತ್ತಿದೆ—ಎಂಬ ಮುಂಗುರುತು ಈಗಾಗಲೆ ಮೂಡಿದೆ. 'ನಾವು ಬರತೇವಿನ್ನ' ಎಂದು ಹೇಳಿ ಹೋದಂತೆ ಬರಬೇಕಾಗಿದೆ. ಮನೆಯ ಹಂಬಲು 'ಬಾರೊ ಸಾಧನಕೇರಿಗೆ' ಎಂದು ಓಗರೆಯುತ್ತಿದೆ. ಋಣಾನುಬಂಧದ ಸೂತ್ರವು ಆಡಿಸಿದಂತೆ ಆಡುವದಲ್ಲದೆ ಜೀವನದಲ್ಲಿ ಹೆಚ್ಚಿನ ಹಿತಕರವಾದ ಸೂಚನೆ ಯಾವುದು ?

ಕನ್ನಡ ತಾಯಿಯ ಪ್ರಾಣಪ್ರತಿಷ್ಠೆ ಬೇಗನೆ ಆಗಲಿದೆ. ಪೀಠ ಸಿದ್ಧವಾಗಿದೆ. ಗುಡಿಯು ರೂಪುಗೊಂಡಿದೆ. ಕಳಸ ಕಂಗೊಳಿಸುತ್ತಿದೆ. ಪ್ರಾಕಾರದ ಹರವಿನ ಆಕಾರವು ಮಸಕಾಗಿ ಮೂಡಿದೆ. ಇನ್ನು ಮುಂದಾಗಲಿರುವ ಭಜನೆ ಪೂಜನೆಗಳಲ್ಲಿ, ಪರ್ವ-ಸಮಾರಂಭಗಳಲ್ಲಿ ಕನ್ನಡ ಸುಹೃತ್‌ಭಾವವು ಸುಖಮುಖವಾಗಿ ಅರಳುವದೆಂದು ಈ 'ಸೂರ್ಯಪಾನ' ವನ್ನು ರಸಿಕ ಭೃಂಗಗಳ ಪದಾರ್ಪಣಕ್ಕೆ ಒಡ್ಡುತ್ತಿದ್ದೇನೆ. ಆದರೂ 'ಸೂರ್ಯಪಾನ' ದ ದೃಷ್ಟಿ ಸೂರ್ಯನ ಕಡೆಗೆಯೇ ಎಂಬುದನ್ನು ಮರೆಮಾಚುವಂತಿಲ್ಲ.

ಯಾವ ಸಹೃದಯತೆಯ ನೆರವಿನಿಂದ 'ಅಂಬಿಕಾತನಯದತ್ತ' ನ ವಾಣಿ ವಿಕಾಸಗೊಂಡಿತೋ ಆ ಸಹೃದಯತೆಯ ಸೇವೆಗೇ ಈ ಕವನಗಳು ನೆರವಾಗಲಿ ಎಂದು ಆರುವತ್ತರ ಅಂಗಳದಲ್ಲಿ ನಿಂತು ಸೂರ್ಯದೇವನಿಗೆ ಪ್ರಾರ್ಥಿಸುತ್ತೇನೆ.

ಸೊಲ್ಲಾಪುರ,
(೩೧–೧–೫೬) ಮನ್ಮಥ-ಮಾಘ

**ದತ್ತ ರಾಮ ಬೇಂದ್ರೆ**

# ಅ ರ್ಪ ಣ

ಶ್ರೀ. ನರಸಿಂಗರಾವ ದೀಕ್ಷಿತ

ಮತ್ತು

ಗೆ. ವಿನಾಯಕ ಗೋಕಾಕ

ಇವರೇ ಪ್ರಮುಖರಾದ

ಗೆಳೆಯರ ವಿಶ್ವಾಸಕ್ಕೆ

ಕೃತಜ್ಞನಾಗಿ.

‘ ಅಂಬಿಕಾತನಯದತ್ತ ’ರ

# ಷಷ್ಟ್ಯಬ್ದಿಪೂರ್ತಿ ಸ್ಮರಣೆ.

ಕನ್ನಡ ನಾಡಿನ ಹೆಮ್ಮೆಯ ಕವಿ ‘ ಅಂಬಿಕಾತನಯದತ್ತ ’ ರಿಗೆ ಮೊನ್ನೆ ತಾನೆ ಅರುವತ್ತು ವರುಷಗಳು ತುಂಬಿದವು. ಅವರ ಹುಟ್ಟೂರು ಶಿರಹಟ್ಟಿಯಲ್ಲಿ ಹುಟ್ಟುಹಬ್ಬವೂ ಜರುಗಿತು. ಆ ದಿನದ ಸವಿನೆನಹಿಗಾಗಿ, ನಮ್ಮ ಬಕುತಿಯ ಒಂದು ಕಿರಿಯ ಕಾಣಿಕೆಯಾಗಿ ಅವರ ಒಂದಾದರೂ ಕವನಸಂಕಲನವನ್ನು ಆ ಮಿತಿಗೆ ಪ್ರಕಟಿಸಬೇಕೆಂದು ನಮ್ಮ ಹಿರಿ ಹಂಬಲವಿದ್ದಿತು. ಈ ಬಗೆಗೆ ಎಣಿಕೆ ಏರ್ಪಾಡು ಬಹು ದಿನದಿಂದ ನಡೆದೂ ‘ಸೂರ್ಯಪಾನ’ ರಸಿಕರ ಕೈಸೇರಲು ಒಂದೆರಡು ವಾರ ತಡವೇ ಆಯಿತು. ೬೦ನೆಯ ಹುಟ್ಟುಹಬ್ಬಕ್ಕೆ ೬೦ ಕವನ ಸುಮನಗಳನ್ನು ‘ಸೂರ್ಯಪಾನ’ ದೊಡನೆ ಪೋಣಿಸುವ ಹೆಬ್ಬಯಕೆಯನ್ನು ಈಡೇರಿಸುವದೂ ಒಂದು ಕಾರಣ ವಿಲಂಬಕ್ಕೆ. ಇರಲಿ.

ಈ ವರುಷದಲ್ಲಿ ‘ಅಂಬಿಕಾತನಯದತ್ತ’ರ ಸಾಧ್ಯವಿದ್ದಷ್ಟು ಕೃತಿಗಳನ್ನು ಕನ್ನಡ ವಾಗ್ದೇವಿಗೆ ಮುಡಿಸಬೇಕೆಂದು ನಮ್ಮ ಆಶೆಯೇನೋ ಇದೆ. ಆ ತಾಯಿಯ ಕರುಣೆ ಇದ್ದಮಟ್ಟಿಗೆ ಆ ಆಸೆ ಹಣ್ಣಿಸೀತು. ಸದ್ಯ, ಇನ್ನು ಕೆಲ ವಾರು ದಿನಗಳಲ್ಲಿ ‘ಕೃಷ್ಣಾಕುಮಾರಿ ಮತ್ತು ಹಾಡು-ಪಾಡು’ ಕೂಡಿ ಒಂದು ಹೊತ್ತಗೆಯಾಗಿ ಹೊರಬರಲಿದೆ ಎಂದರುಹಲು ಸಂತಸವಾಗುತ್ತಿದೆ.

ಶ್ರೀವಾಗ್ದೇವಿಯ ಪೂಜೆಗೆ ತಮ್ಮ ‘ಸಾಹಿತ್ಯ’ ವನ್ನು ಒದಗಿಸಿ ಕೊಟ್ಟ ‘ಅಂಬಿಕಾತನಯದತ್ತ’ ಬೇಂದ್ರೆಯವರಿಗೆ ನಾವು ಋಣಿ ಎಂಬುದನ್ನು ಎಷ್ಟೆಂದು ಹೇಳಲಿ ?

**ಭಾಲಚಂದ್ರ ಘಾಣೇಕರ**

**ಪ್ರಕಾಶಕ.**

# ಪರಿವಿಡಿ

# ಸೂರ್ಯಪಾನ

ಏನಿದರ ಔನ್ನತ್ಯ ಏನಿದರ ಔದ್ಧತ್ಯ
ಕುಕ್ಕಿಸುವ ಕಣ್ಣುಗಳ ದಿಟ್ಟಿಸುವದು.
ಬಾನಗಣ್ಣಿನ ಬಿಸಿಯ ಹಸಿಯಾರದಲೆ ಕುಡಿದು
ಬೆಳಕ ನೀರಡಿಕೆಯನು ಹುಟ್ಟಿಸುವದು.

ಗಿರಿನಾರ ಕೋಡಿನಲೊ ಕೈಲಾಸ ಶಿಖರದಲೊ
ವಿಶ್ವದೀಪಕ ದೃಷ್ಟಿ ಮೂಡುವಂತೆ
ದಿಂಬಿನಲಿ ಮೊಗದೋರಿ ಎಸಳನಾಯಾಳಿಸುತ
ಸಿಂಹಾವಲೋಕನದಿ ನೋಡುವಂತೆ

ಸೂರ್ಯಪಾನವ ನೋಡು ಹೇಗೆ ನಿಂತಿಹುದು.
ಎನುವಂತೆ–ದಿವ್ಯತೆಯ ದೀಕ್ಷೆ ಇಂತಿಹುದು.
ಮೇರುದಂಡವು ಚಿಗಿತು ಹೂತ ಹಾಗೆ
ಹೃದಯದಾಕೂತಿಗಿದೆ ಕಣ್ಣು ಮೇಗೆ.

# ಸಪ್ತಕಲಾ

## ೧

ಸ್ಪಂದಽ ಬಂಧಾ ಸ್ವಚ್ಛಂದಾ
ಸ್ವೈರಾಽ ನಿರ್ವೈರಾಽ ಸಹಜಽ ಅಂದಾಽ
ಆಡಲೂ ಬರದಾಽ ಸುಮ್ಮನಿರದಾಽ
ಕಾದುಽ ಕಾದುಽ ನಾದಾಽ
ಭೇದಾಽ ಅಭೇದಾ, ಮೀರಿ
ಭಾವಽ ನೋವಽ ತಾಳದೇ
ತನ್ನಽ ತಾ ನುಂಗೀ
ಎದೆಯೊಳಗಿಂಗೀ
ಸ್ವಾತಂತ್ರ್ಯಽ ಪಡೆಯುವದಣ್ಣಽ
ಅರ್ಕಽ ಚಂದ್ರಽ ಸಾಂದ್ರವಾಗಿಽ
ವಾಚಾತೀತಽ ಗೀತಽ
ಸ್ವರಮೇಳಽ–ತಾಳಽ–ರಾಗಽ
ರೀತಿಯಲ್ಲಿ
ಆತ್ಮಽ ಪ್ರೀತಿಯಲ್ಲಿ

## ೨

ಇದೋ ಅರೆವೋ ಮರೆವೋ
ಅವಳಿಽ ಜವಳಿಽ ತರವೋ
ಧ್ರುವಾಸ್ಮೃತಿಯಾ ಕರೆವೋ

ಆಕಾಶ ರೇಖಾ ಲೇಖಾ
ಹೃದಯಾಂತರ್ಕೇಕಾ
ಭಾವಽ ನೋವಽ ತಾಳದೇ
ಅದೃಶ್ಯಽ ಹೊಳೆದೂ
ಕಾಣ್ಕೆಽ ರೂಪಽ ತಳೆದು

ಸ್ವಾತಂತ್ರ್ಯ ಪಡೆಯುವದಣ್ಣಽ
ಟೆಂಕಾಽ ಆತಂಕಾ ಸರಿಸಿಽ
ವ್ಯಂಗ್ಯಾಽ ವಕ್ರಽ ಜಿರೆಸಿ,
ಎಲ್ಲೂಽ ಕಲ್ಲೂಽ ಚಿತ್ರಽ
ಮೂರ್ತಿಯಲ್ಲಿ
ಕೀರ್ತೀಽ ಅರ್ತಿಯಲ್ಲಿ

೩

ತಂತ್ರಽ ಅರಿಯದೇಽ
ಮಂತ್ರಽ ಮಣಮಣಗುಟ್ಟೇ
ಕೆಟ್ಟಽ ಯಂತ್ರದಂತೇ
ಕೈತಪ್ಪಿಽ ಎತ್ತೆತ್ತೊ
ತತ್ತರಿಸುತ್ತಿರಲು

ಭಾವಽ ನೋವಽ ತಾಳದೆ,—
ಮೌನಽ ಕೂಡಿಽ
ಮೌನಽ—ಮೂಡಿಽ

ಸ್ವಾತಂತ್ರ್ಯಽ ಪಡೆಯುವದಣ್ಣಽ
ಆವೇಶಽ—ಅಂಗಾಂಗಽ—ತುಂಬಿಽ

ನರನರಽ ನಲುಗಿಽ ಅಲುಗೀಽ
ಗೊಂದಣಽ—ತಾಂಡವಽ—ಲಾಸ್ಯಽ
ನೃತ್ಯದಲ್ಲೀ
ಇಲ್ಲೀಽ ಮರ್ತ್ಯದಲ್ಲಿ

೪

ಕರ್ಮಾಽ ಅಕರ್ಮದ ತಂತ್ರಽ
ಫಲವಿಫಲತೆಯೊಳತಂತ್ರಽ
ಈಶ್ವರೀ ಯಂತ್ರಽ
ಸ್ವರೂಪಽ ತೋರ್ಪಽ ದೀಪಽ
ಮಿಂಚೀಗೂ ಸಮೀಪಽ
ಭಾವಽ ನೋವಽ ತಾಳದೇಽ
ಪ್ರಕೃತಿಯೂಽ ದುಡಿದೂಽ
ದೈವಽ ತಡೆದೂಽ
ಸ್ವಾತಂತ್ರ್ಯಽ ಪಡೆಯುವದಣ್ಣಽ
ಅವಿದಿತಽ ವಿದಿತಽ ಉದಿತಾಽ
ಸಾತ್ವಿಕಾಽ—ಭಾವಾಽ ಜೀವಾಽ
ಅಭಿನಯಽ ವಚನಽ—ನಾಟ್ಯಾಽ-
-ಕೃತಿಯಲ್ಲಿ
ದೃಷ್ಟೀಽ ಶ್ರುತಿಯಲ್ಲಿ

೫

ಶಾಂತಾಽ ಶಿವಾಽ ಸೀಮಾತೀತಾಽ
ಸತ್ ಶಕ್ತೀ ಸಹಿತಾ

ಚೇತಾಽ ಜಗನ್ನೇತಾ
ಸ್ವಾಲಿಂಗಿತ ದ್ವೈತಾ ಅದ್ವೈತಾ
ಸಂತತಾಽ ಅನಂತಾಽ
ಭಾವಽ ನೋವಽ ತಾಳದೇ
ಬಯಕೆಽ ಬೇನೆಗೆಽ ಬೆಂದು,
ತನ್ನೊಳು ತಾ ನಿಂದು
ಸ್ವಾತಂತ್ರ್ಯಽ ಪಡೆಯುವದಣ್ಣಽ
ಬೀಜಽ ಬಿಂದೂದ್ಭೂತಾ
ಕಲಲಾ ಜಾತಾ
ಇದು ಅಕಲಽ ವಿಕಲಽ ಸಕಲಽ
ಸುಕಲೆಯಲ್ಲಿ
ಈಽ ಕಳೇವರದಲ್ಲಿ

೭

ಜನ್ಮಾಽ ಜನ್ಮಾಂತರ ತರತಮಭಾವಾ
ಪ್ರಕಟಸ್ವಭಾವಾ
ಪ್ರತಿಸರ್ಗೋತ್ಸುಕತಾ ಪ್ರತಿಭಾ
ನಿರಾಲಂಬಾ ಸ್ವಯಂಭಾ
ಕಲ್ಪನಾಗರ್ಭಿತ ಬಿಂಬಾ
ಭಾವಽ ನೋವಽ ತಾಳದೇ
ಅನನ್ಯಾ ಈಶ್ವರ ಪ್ರಭವಾ
ಕಲಾ ವಿಭವಾ
ಸ್ವಾತಂತ್ರ್ಯಽ ಪಡೆಯುವದಣ್ಣಽ
ಲೋಕಾಽ ಲೋಕ ಪ್ರಕಾರಾ
ದೇವತಾಕಾರಾ

ಇದು ದರ್ಶನ ಮುಖರಾ ಶಿಖರಾ
ವಾಸ್ತುವಲ್ಲಿ
ಗುಡಿ ಗೋಪುರದಲ್ಲಿ

೨

ಸಕಲಾಽ ಸಿದ್ಧಾಽ ಸರಸ್ವತಿ ವೀಣಾಪಾಣಿ
ಪಶ್ಯಂತಿಯ ವಾಣಿ
ಛಂದಾರೂಢಾ ನವೋಢಾ
ಮುಗ್ಧಾ, ರಸಿಕಾ, ಅನೂನಾ
ಧ್ವನಿತ ಪ್ರಾಣಾ
ಭಾವಽ ನೋವಽ ತಾಳದೇ
ಸ್ಫೂರ್ತಾ ಅಮೂರ್ತಾ, ಆವಿರ್ಭೂತಾ
ಭವಮಂಥನ ಮಂತ್ರಾ
ಸ್ವಾತಂತ್ರ್ಯಽ ಪಡೆಯುವದಣ್ಣಽ
ಅಕಾಮ್ಯಾ ರಮ್ಯಾ
ಶ್ರೋತ್ರಿಯಗಮ್ಯಾ
ಭವ್ಯಽ ನವ್ಯಽ ಹೃದಯದ್ರವ್ಯ.
ಕವಿಯಲ್ಲಿ
ದಿವ್ಯಽ ಕಾವ್ಯದಲ್ಲಿ

———

# ವಿಶ್ವರೂಪ ದರ್ಶನ

ವಿಶ್ವರೂಪ ನೋಡುತ್ತಿರೆ ಮೈಮರೆತರ್ಜುನನು
ಎಚ್ಚತ್ತನು ಮೈ ಅರಿವಿಗೆ ಕಂಪಿಸಿತೆಲ್ಲ ತನು
'ಭೀಷ್ಮಂಚ ದ್ರೋಣಂಚ ಜಯದ್ರಥಂಚ ಕರ್ಣಂಚ'
ಅಬ್ಬಬ್ಬಾ ತನ್ಮಧ್ಯೇಃ ತಾ ನೋಡುವದೇನು ?

ಇದು ನೋಡಲು ಕಣ್ತೆರೆದೆನೆ? ಅದ ಬೇಡಿದರಾರು ?
ಈ ಧಗೆಯಲಿ ನಗೆಯಾಟದ ಹಗೆ ಹೂಡಿದರಾರು ?
ಧರ್ಮಾ, ಭೀಮಾ, ನಕುಲಾ, ಮತ್ತಾ ಸಹದೇವಾ
ನಾನಿರುತಿರೆ, ನೀನಿರುತಿರೆ, ವಧೆ ಮಾಡಿದರಾರು ?

ಕೃಷ್ಣಾ, ಹರಿಹರಿ, ಕೃಷ್ಣಾ ಹರಿ ಹರಿ ಈ ಕಣಸು
ಎಚ್ಚರದಾ ಭ್ರಮೆಗಿಂತಲು ಹಿರಿ ಹುಚ್ಚೀ ಕನಸು
ಕನಸೋ ಕಣಸೋ ನನಸೋ ಹರಿ ಹರಿ ಹರಿ ಕೃಷ್ಣಾ—
ಸತ್ತಿಲ್ಲವು ಇನ್ನೂ ಈ ನರನಾ ನರಮನಸು.

ನನಗೊಲ್ಲದ ಬದುಕನು ನಾನೆಂದೆಂದೂ ಒಪ್ಪೆ
ಎಂಬೆನೆ? ಕಾಂಬೆನೆ ನಿಜವನು ? ಸುಳ್ಳಿನ ಈ ತಿಪ್ಪೆ
ಸುತ್ತೂ ಮುತ್ತೂ ಮತ್ತೂ ಸುತ್ತುತ್ತಿದೆ ಹಾಗೇ.
ಹೇಳದೆ ಕೇಳದೆ ತಾವೇ ಮುಚ್ಚಿದವೀ ರೆಪ್ಪೆ.

ಕಣ್ಮುಚ್ಚಿದರೂ ಕಾಂಬುದು ಏನೀ ವಿ—ಚಿತ್ರ
ಕಣ್ತೆರೆದರು ಕೆತ್ತಿದ್ದಿದೆ ಮರೆಯದ ಸ್ಮೃತಿ ಮಾತ್ರ
—ಖೂಳರು, ಮೂಳರು, ಕಾಳರು, ಇದು ನಾಚಿಕೆಗೇಡು—
ಕರುಳನೆ ಹೊತ್ತಿಸಿ ಯಾಕೋ ಉರಿವುದು ಒಳಗಾತ್ರ

ಕಣ್ಣೀರಿಗೆ ತೊಳೆದಿಳಿವುದು ಕಾಡಿಗೆ ಎಂಬಂತೆ
ದಿವ್ಯಾಂಜನವೂ ಹಾರಿತು, ರಣ ಮರಣದ ಸಂತೆ
ಮಾರಾಟಕೆ, ಏರಾಟಕೆ, ಹೊರಚಲ್ಲಿದೆ ಇಲ್ಲಿ
ನಾರಾಯಣನಾ ಮಾಯೆಗೆ ನರನಾಗುತ ನಿಂತೆ.

ಒಪ್ಪಿದೆ ಒಪ್ಪಿದೆ ಕೃಷ್ಣಾ ನೀ ನಾಟಕಕಾರಾ
ಮೊದಲೀ ತೋರಿಸು ಎಂದೆನೆ ನಾಟಕದಾಧಾರಾ
ನೋಟಕ, ಬೂಟಕ, ಮಾಟಕ ಏನೇನೋ ಮಾಡಿ
ಸೂತ್ರವ ಹಿಡಿದೂ ರಂಗವ ತುಂಬಿದೆ ಹೇ ಧೀರಾ !

ಸೃಜವ ನೋಡಲು ನಿಜವೂ ಬೇಕಿವೆ ಸನ್ನೇತ್ರಾ
ಹುಟ್ಟೂ ಇರವೂ ಸಾವೂ ಅಲ್ಲಿವೆ ಚಿನ್ಮಾತ್ರಾ
ಕಥೆ ನಿನ್ನದು, ವ್ಯಥೆ ನಿನ್ನದು, ನಿನ್ನದೆ ಉಸಿರಾಟಾ.
ಆಡುವ, ನೋಡುವ, ಮೂಡುವದೊಂದೇ ಶ್ರೀಪಾತ್ರಾ

ಎಳೆನಗೆಯಲಿ ಇಳೆ ಚಿಗಿಯಲಿ ಮುರುಕೊಳಿಸಲಿ ಹೂವು
ಹಿಮ ಶಿಶಿರದ ಸ್ಮೃತಿ ಕಳಚಲಿ, ಇದೊ ಇಗೊ ಈ ಠಾವು
ತುಂಬಲಿ ತುಳುಕದೆ ಸೂಸಲಿ, ಘೀಸಲು ಮುರಿಯದೆಯೆ.
ಮಿಕ್ಕಲಿ, ಒಕ್ಕಲುಗೊಳ್ಳಲಿ ಆ ನಾವೂ ನೀವೂ.

ಕೃಷ್ಣಾ ಆಡೈ ಆಟವ ನಿನ್ನಾಕ್ರಮದಂತೆ
ಸುಳ್ಳೇ ಬಣ್ಣವ ಕೊಡದಿರು ನಮ್ಮೀ ಭ್ರಮದಂತೆ
ಉಡುಗಿಸು, ನಡುಗಿಸು, ಅಡಗಿಸು, ದಿವ್ಯದ ತಾಳದಲಿ
ನೀನೋ ಗುರು, ನಾ ಶಿಷ್ಯನು, ರಣ ಆಶ್ರಮದಂತೆ.

---

# ಕೇಳಿರೊಂದು ಸೋಜಿಗ

ಹೀಗು ಉಂಟು ಈ ಜಗ
ಕೇಳಿರೊಂದು ಸೋಜಿಗ !
ಗಾಂಧಿ ದೇಹ ಬಿಟ್ಟರಂತೆ
ಜನರು ಅದನು ಸುಟ್ಟರಂತೆ
ಹೌದು, ಗಾಂಧಿ ಸತ್ತರಂತೆ
ಜನರು, ನಿಜವೆ, ಅತ್ತರಂತೆ.
ದಿನದ ದಿನದ ದಿನದ ಹಾಗೆ
ಗಾಂಧಿಜೀಗೆ ಬಿನದವಾಗೆ
ಪ್ರಾರ್ಥನೆಗೇ ಬಂದರಂತೆ
ಆಗದವರು ಕೊಂದರಂತೆ
ಗಾಂಧಿಯವರು ಬಿದ್ದರಂತೆ
ನೋಡುವವರು ಇದ್ದರಂತೆ.
ಪಾಪ, ಪಾಪ, ಅಯ್ಯೊ ಪಾಪ
ಇದಕು ಇರಲಿ ಉಶ್ಯಾಪ !
ಗಾಂಧಿಜೀ ಮಹಾತ್ಮರಂತೆ
(ಆದರೂನು) ಅಂತು ಒಮ್ಮೆ ಸತ್ತರಂತೆ !
ಕೇಳಿರೊಂದು ಸೋಜಿಗ !

ಶಾಂತಿದೂತನಾಗಿ ಬಂದ
ಮಹಾಧೀರ ಶಿವನ ಕಂದ
ಪ್ರೇಮಮಂತ್ರವನ್ನು ತಂದ
ಅದೇ ಅಂದ ಅಂದೆ ಅಂದ.
ಕೈಯ ಮುಗಿದು ಕಣ್ಣ ಮುಚ್ಚಿ
ಮೈಯನೊಗೆದು ಹೃದಯ ಬಿಚ್ಚಿ
ಹೊರಟಿತೊಂದು ಶಬ್ದವು
ಆದರ ಧ್ವನಿಯು ಅಬ್ದವು.
ಬಾನುಲಿಯೇ ಕಂಪಿಸಿ
ವಿಶ್ವವೆಲ್ಲ ಝೊಂಪಿಸಿ
ಏನನರ್ಥ ಏನನರ್ಥ
ಎಂದು ಕೂಗೆ ಕೂಗಿತು.
ಅದರ ಬೆನ್ನಿಗೊಂದೆ ಅರ್ಥ
ಒಂದೆ ಭಾವ ಸಾಗಿತು.
ಜೀವಕೆಲ್ಲ ಧಾವತಿ
ಪ್ರೇಮಕೊಂದು ಆಹುತಿ !
ಕೇಳಿರೊಂದು ಸೋಜಿಗ !

ಸಾಕ್ರೆಟೀಸ ಆತ್ಮವೀರ
ಕುಡಿದನಲ್ಲ ವಿಷದ ನೀರ !
ಧೀರ ಕ್ರೈಸ್ತ ಇದ್ದನೆಲ್ಲಿ ?
ಅವನ ದೇಹ ಸಿಲುಬೆಯಲ್ಲಿ !
ನ್ಯಾಯದೊಂದು ನೆಪವ ಮಾಡಿ
ವಿಚಾರಣೆಯ ಆಟ ಆಡಿ

ಕೊಂದರಾಗ ಧೂರ್ತರು.
ಅದೂ ಬೇಡವಾಯ್ತೆ ಇಲ್ಲಿ ?
ಮುಗಿಸಿದರೋ ಮೂರ್ಖರು.
ಇನ್ನು ಗುಂಡು ತಾಕದಲ್ಲಿ
ಕೊಲೆಪಾತಕ ಸೋಕದಲ್ಲಿ
ದೃಶ್ಯ ತೀರಿ ಅದೃಶ್ಯದಲ್ಲಿ
ಆದರಿಲ್ಲೆ ಭೂಮಿಯಲ್ಲಿ
ನಡೆವುದದರ ಪರಿಣತಿ
ಗಾಂಧಿಗಂಧಸಂಗತಿ.
ಕೇಳಿರೊಂದು ಸೋಜಿಗ !

ದೇವನುಂಟು ದೈವವುಂಟು
ಅದಕು ನಮುಗು ಇಹುದು ನಂಟು
ದುರ್ವಾಸನೆ ನಾರದಲ್ಲಿ
ಅಹಂಕಾರ ಸೇರದಲ್ಲಿ
ವಿಶ್ವಹೃದಯ ಹಾರದಲ್ಲಿ
ಪ್ರೇಮುದೊಂದು ರತ್ನವು
ಅದಕೆ ವಿಶ್ವಯತ್ನವು.
ಅದೇ ನಮ್ಮ ನಿಮ್ಮ ಗುರಿಯು
ಅದು ಇಲ್ಲದ ವಿಶ್ವ ಉರಿಯು
ದ್ವಂದ್ವ ಮೀರಿದೊಂದಿದೆ
ದ್ವಂದ್ವ ಎಂದೊ ಕೊಂದಿದೆ
ಸಾವಿನಲ್ಲಿ ಸಾವಿದೆ
ನೋವಿನಲ್ಲಿ ನೋವಿದೆ.

ಸಾವು ನೋವು ಮೀರಿದಾ
ಗಾಂಧಿ ಹೇಗೆ ತೀರಿದಾ ?
ಕೇಳಿರೊಂದು ಸೋಜಿಗ !

ಬಾಳು ಜಗವೆ ಬಾಳೆಲೋ
ಪ್ರೇಮದಿಂದ ತಾಳೆಲೋ
ಎಂದು ಕೊನೆಗು ಸಾರಿದಾ
ಗಾಂಧಿ ಸ್ವರ್ಗಕೇರಿದಾ.
ಅದನೆ ಇಲ್ಲಿ ತರುವನೋ ?
ಮತ್ತೆ ಮರಳಿ ಬರುವನೋ ?
ಏಕೆ ಹರಟೆ ? ಏಕೆ ಪ್ರಶ್ನೆ ?
ಬೇಕು ಜೀವದುತ್ತರ.
ಜೀವನದೊಳು ಎತ್ತರ.
ಗಾಂಧಿ ಅಲ್ಲೆ ನಾವು ಇಲ್ಲೆ
ಹಳೆಯ ವಾದ ನಡೆದರೆ
ಗಾಂಧಿ ರಾಮ ಕೃಷ್ಣ ಅಲ್ಲಾ
ಕ್ರೈಸ್ತ ಬುದ್ಧ ಎಲ್ಲ ಎಲ್ಲಾ
ಪ್ರೇಮಮಾರ್ಗ ಹಿಡಿದರೆ
ಒಂದೆ, ಶಾಂತಿ ಪಡೆದರೆ ?
ಕೇಳಿರೊಂದು ಸೋಜಿಗ !

---

# ಶ್ರದ್ಧಾಂಜಲಿ

ಹಿಂಸೆ ಕೊನೆಗಹಿಂಸೆಯನ್ನು ಗುಂಡುಹಾಕಿ ಕೊಂದಿತೋ?
ತನ್ನ ಕೊಲೆಯ ಕೊನೆಗಾಣಿಸೆ ಇವಗೆ ಶರಣು ಬಂದಿತೋ?
'ಅಯ್ಯೊ ಇವನು ಅಮರ, ನಾನೆ ತಾನೆ ಸತ್ತೆ' ಎಂದಿತೋ–
'ನಾನೆ ಸತ್ತೆ' ಎಂದಿತೋ?

ಗಾಂಧಿದೇಹ ಸುಟ್ಟ ಬೆಳಕು ಜಗದ ತಮವ ಕಳೆದಿದೆ,
ಗಾಂಧಿ ಹೋದರೆಂಬ ಸುದ್ದಿ ಬಾನ ತುಂಬಿ ಉಳಿದಿದೆ,
ಗಾಂಧಿಗಂಧ ದಿಗ್-ದಿಗಂತ ಕೀರ್ತಿರೂಪ ತಳೆದಿದೆ—
ಕೀರ್ತಿರೂಪ ತಳೆದಿದೆ!

ತೀರ್ಥಗಳ ಪವಿತ್ರ ಮಾಡಿದಂಥ ತೀರ್ಥರೂಪನು
ಯಜ್ಞವಾದ ಬಾಳಿನಲ್ಲಿ ತಾ ಸುಖಸ್ವರೂಪನು
ಸೋಲನೆಲ್ಲ ಗೆಲವುಗೊಳಿಸಿ ಮುಕ್ತನಾದ ಭೂಪನು—
ಮುಕ್ತನಾದ ಭೂಪನು.

ಬತ್ತಿ ಸುಟ್ಟುಹೋದರೇನು ಬೆಳಕು ನಂದಿತೆಂಬರೆ?
ಹಾಕಿ ಬತ್ತಿ ದೀಪವೆತ್ತಿ ಇರುವ ಜ್ಯೋತಿ ಕಾಂಬರೆ!
ಎಣ್ಣೆ ತೀರಿತೆನ್ನಬೇಡಿ ಬೇರೆ ನೇಹ ತುಂಬರೆ—
ಬೇರೆ ನೇಹ ತುಂಬರೆ?

ಹಿಂಸೆ ಕೊನೆಗಹಿಂಸೆಯನ್ನು ಗುಂಡುಹಾಕಿ ಕೊಂದಿತೊ?
ತನ್ನ ಕೊಲೆಯ ಕೊನೆಗಾಣಿಸೆ ಇವಗೆ ಶರಣು ಬಂದಿತೊ?

————

# ಅಮರ ಮರಣ

ಆ ಯುಗಾದಿ ಬರುವಂತೆ ಮರಳಿ ಓ ಶ್ರಾದ್ಧದಿನವೆ ಬಂದೆ
ಮರೆತ ಮರಣವನು ನೆನೆದ ಮನದಿ ಚೈತನ್ಯವನ್ನು ತಂದೆ
ಹರಿಜನರ ಬಳಗ ಉಳಿದವರ ಒಳಗೆ ಬಳಸಿದೆಯೊ ನಾಡತಂದೆ
ಮಾನವತೆ ಒಂದು, ಭಾರತಿಯರೆಲ್ಲ ಒಂದಲ್ಲವೇಕೆ ಎಂದೆ.

ಬರಿಯಸ್ಮೃತಿಯ ಬಾಳುವೆಯ ಮರ್ತ್ಯ ಮೈ ಕಳಚಿಬೀಳಲಾಗಿ
ಅವನ ನೆನಪೆ ಅಳಿಯುವದು ಅವನ ಮೈಯೊಡನೆ ಮಾಯವಾಗಿ
ಸತ್ಯವಂತನವ ಸತ್ತನೆಂದು ಪರಮಾರ್ಥದಲ್ಲಿ ನಂಬೆ.
ಪ್ರೇಮಧರ್ಮವನು ಸಾರಿದವಗೆ ಎಲ್ಲಿಹುದು ಮರಣವೆಂಬೆ.

ಸಾವು ಯಾರಿಗಿದೆ? ಸೋವ ಧಿಕ್ಕರಿಸಿ ನಿಂತ ಧೀರಗೇನೇ
ಮೃತ್ಯುಮುಖದಲ್ಲಿ ರಾಮನಾಮವನು ಬಿತ್ತಿದವಗೆ ತಾನೇ
ಸಾವುಗೀವು ಉಂಟೆಂಬ ಮಾತು ನಂಬುವರು ಯಾರು ತಾನೇ ?
ಆಡ ಹಾಲನುಂಡವನು ಕಾದ, ಕಾದಾಡಿದಂತೆ ಆನೆ.

ನಿಃಶಸ್ತ್ರವೀರ, ಸಾಮ್ಯೈಕಶೂರ, ದಾಂತವಿನಯಧೀರ,
ವ್ಯಾಪಾರಚತುರ, ಉತ್ತೀರ್ಣನಾದ ಶಾಂತಿಯ ಅಪಾರತೀರ
ಇಲ್ಲವರ ಕೂಡ ಉಳ್ಳವರ ಜೋಡಿ ಸರಿಸಮವು ಇವಗೆ ನಂಟು
ಇವನ ವರ್ಣನೆಯೆ ಅಮರವಹುದು, ಇಂಥವನು ಮರ್ತ್ಯನೆಂತು ?

ಕುಂಭಮಾಸದೀ ಗಾಳಿ ತಾನೆ ವೈತಾಳಿಯಾಗಿ ಬಂದು
ಕಳೆವ ಎಲೆಗಳಲಿ ಚಿಗುರುಮೊಳೆಗಳಲಿ ಉಲಿಯುತಿಹುದು ನಿಂದು
ಅಳಿವುದಷ್ಟೆ ಅಳಿದೀತು ಬದುಕುವುದು ಪ್ರಾಣಜಾತ ಸತ್ಯ.
ರೂಪಕಳಿವುಂಟು ಆ ಸ್ವರೂಪ ಆಕಾಶಕಿಂತ ನಿತ್ಯ.

ಕೀರ್ತಿದೇಹಿಗೆಲ್ಲಿಹುದು ಮರಣ ? ಸತ್ಕೀರ್ತಿಯೊಂದು ಬೆಳಕು.
ಕಳೆದ ಬಟ್ಟೆ ತೊಳೆದಂತೆ ಹರಿದುಹೋಗುವದು ಮಲಿತ ಕೊಳಕು.
ಹಗಲು ಬಂದೀತು ಹಗಲು ಹೋದೀತು ಚಿಕ್ಕೆ ಬೆಳಗುತಿಹುದು.
ಜೀವ ಜೀವ ಸಂಗ್ರಾಮಗಳಲಿ ಆ ಶಾಂತಿ ಮೊಳಗುತಿಹುದು.

ನೆಲವ ಮುದ್ದಿಡುವ ಚಾರಿಯಲ್ಲಿ ಪದಚಾರಿಯಾಗಿ ಹೊರಟ.
ಕೈಯಲ್ಲಿ ಕೋಲು, ಅದಕಿಲ್ಲ ಸೋಲು, ಗೆಲುವೊಂದೆ ಬಲ್ಲ ಅಘಟ.
ಸ್ವಾತಂತ್ರ್ಯದುಪ್ಪು ಸಾಗರದವರೆಗೆ ಮುಟ್ಟಿಸುವ ಪಂಥ ತಳೆದ.
ಅಂಥ ಉಪ್ಪಿನಲಿ ಜೀವ ರುಚಿಗೊಳಿಸಿ ಸಪ್ಪೆತನವ ಕಳೆದ.

ನಿನ್ನ ತಪ್ಪುಗಳೆ ಒಟ್ಟಿ ನಿಂತು ಆ ಹಿಮಾಲಯವೆ ಆಗೆ,
ಅದರ ತಲೆಯನ್ನೆ ಮೆಟ್ಟಿ ಮುಂದೆ ಹಾದಿಯನು ಹಿಡಿದು ಸಾಗೆ,
ಶಾಂತಿಧ್ರುವದಿ ಕಣ್ಣಿಟ್ಟೆ ಹೆಜ್ಜೆಹೆಜ್ಜೆಯಲಿ ಗುರಿಯು ತಾಗೆ,
ಬುದ್ಧಬೋಧ ಪ್ರಸರಿಸಲು ಹೊರಟ ಆ ಪ್ರವಾಸಿಕರ ಹಾಗೆ.

ಜನಕೆ ಬಯಲು ಕಂಡಲ್ಲಿ ತೆರೆದೆ ಜೀವನದ ರೂಪರೇಖೆ,
ಉಷೆಯ ಸ್ವಪ್ನದನಿರುದ್ಧನೆನ್ನು ಬರೆದಂತೆ ಚಿತ್ರರೇಖೆ.
ಬಣ್ಣ ಬಳಸದೇ ಬರೆದ ಚಿತ್ರದಲಿ ಬೇರೆಯೊಂದು ಚೆನ್ನು.
ಶಾಂತಿಶ್ರದ್ಧೆ ಬದುಕಿರುವವರೆಗೆ ಮರೆತಾರು ಯಾರು ಇನ್ನು ?

ಇವ ಬಿಳಿಯ ಕರಿಯ, ಇಸ್ಲಾಮಿ ಹಿಂಧು, ಆರ್ಯನು ಅನಾರ್ಯನೆಂದು,
ಜೀವಬಾಂಧವ್ಯ ಒಲೆಗೆ ಹತ್ತಿರಲು ಪರಸ್ಪರರ ಕೊಂದು,
ಮೃತ್ಯುಧ್ಯಾನವನೆ ಮಾಡುತಿರುವ ರೌದ್ರಿಕರ ನಡುವೆ ನಡೆದೆ;
ದಾಯಾದಿತನದ ಸಾಗರದ ಮಥನದಿಂದೆದ್ದ ವಿಷವ ಕುಡಿದೆ.

ನಿನ್ನ ಹಿಂಸೆಗಾ ಹಿಂಸೆ ಕಾಣಿಕೆಯೆ? ಯಾವ ನ್ಯಾಯನೀತಿ?
ಎಂಥ ಪೌರುಷದ ಏನು ನೀತಿಯಿದು? ಯಾರ ವೀರಜಾತಿ?
ಸಾಧು ಸಾಧು ಜಗ ಕೂಗುತಿಹುದು ತವ ಮರಣ ಸಾರ್ಥವಹುದು.
ಸತ್ತರೇನು ಸಾರ್ಥಕತೆ ದಮ್ಮಿನಲಿ ಕೆಮ್ಮಿ ನವಿದು ನವಿದು.

ಇಂದ್ರಿಯದ ತೃಪ್ತಿ ಉಳಿದೆಲ್ಲ ಸುಪ್ತಿ ಜೀವನದ ಆಸರಾಗಿ
ಅಲ್ಲಗಳೆದು ಆತ್ಮವನು ಬಾಳುತಿರೆ ಬಲಿಯ ದಾಸರಾಗಿ
ಸ್ವಾರಾಜ್ಯದೊಂದು ಘನಕನಸು ಕಂಡು ಕಟಿದಿಟ್ಟೆ ಆಗಿ ತ್ಯಾಗಿ.
ಕಾರುಣ್ಯದಲ್ಲಿ ಮಾನವರ ಮರ್ಮ ಮೂರ್ತಿಸುವ ಶಿಲ್ಪಿಯಾಗಿ.

ನಿನ್ನ ಕೃತಿಯ ಸ್ಮೃತಿ ಶಾಂತಿಶ್ರುತಿಯ ತಂತಿಯನು ಮೀಟುತಿಹುದು.
ಮನದ ಜನ್ಮಗಳ ಕಳೆವ ಹಾಗೆ ತನ್ನನ್ನೆ ದಾಟುತಿಹುದು.
ನಿನ್ನ ಮೂರ್ತಿ ಪ್ರೇರಿಸುವದಯ್ಯ ದಿಗ್ದರ್ಶಿ ನೇತ್ರದಂತೆ,
ಆಕರ್ಷಿಸುವದು ಒಳಹೊರಗೆ ನಮ್ಮ ಸ್ಮೃತಿರೂಪ ಚಿತ್ರದಂತೆ.

ಏನನಾದರೂ ಹೇಗೊ ತಿಂದು ಬದುಕುವದೆ ಬಹಳರಾಸೆ.
ಸತ್ಯದನ್ನವನೆ ಉಂಡು ಬಾಳಿ ಎನ್ನುವದು ಪುರುಷಭಾಷೆ.
ಅಮರವಾವುದೆಂಬುವದನೇನು ಅವಿವೇಕಿ ತಾನು ಬಲ್ಲ?
ದೇಹಧರ್ಮಕ್ಕೋ ಸಾವು ಉಂಟು, ಆತ್ಮಿಕಗೆ ಸಾವು ಇಲ್ಲ.

———

# ಜಯ ಜಯಾ ಗಾಂಧಿ ಮೋಹನಾ

ಜಯ ಜಯಾ ಗಾಂಧಿ ಮೋಹನಾ
ರಾಷ್ಟ್ರದೋಹನಾ
ಸತ್ಯ ಶರಣಾ—ಸತ್ಯ ಶರಣಾ

ಕಾದಿದಿರಿ ಶಾಂತಿಗೆ ಅಂತು
ಅಂತನಃ ಬಂತು
ಭೀಷ್ಮ ಮರಣಾ—ಭೀಷ್ಮ ಮರಣಾ

ಅಸರಂತ ನಿಮ್ಮ ಜೀವನಾ
ಒಂದೆ ಸಮ ರಣಾ
ಆತು ಕೊನಿಗೂ—ಆತು ಕೊನಿಗೂ

ಸೀಳಿದಿರಿ ಸಾವಿನ ತಲೀ
ಕೊಟ್ಟರಿ ಬಲೀ
ಕೀರ್ತಿಶನಿಗೂ—ಕೀರ್ತಿಶನಿಗೂ

ಒಡದರ ನಿಮ್ಮ ಒಡಲೋ
ಬಂತು ಸಿಡಿಲು
ರಣಬೊಬ್ಬಿ ನಿಮ್ಮ ಹೆಸರೋ
ಏನು ಕುಸುರು

ಮಿಡಿದಿತ್ತು ಮಿಂಚಿನ ಕಾಂತಿ
ಮುಗಿಲಿನ ತಂತಿ
ಬಯಲಾತು ಮಾತಿನ ಭ್ರಾಂತಿ
ತಣ್ಣಿಸಿತು ಶಾಂತಿ
ಊರ್ಧ್ವದ ಕಾಳಿಯ ಕ್ರಾಂತಿ
—ಮಾನವೋತ್ಕ್ರಾಂತಿ
ಸ್ವಾತಂತ್ರ್ಯದೂತ ಜಯಜಯಾ
ಜಾತ ನಿರ್ಭಯಾ
ರಾಷ್ಟ್ರಹವನಾ—ರಾಷ್ಟ್ರಹವನಾ
ಕವಿಹೃದಯ ಜಾತ ಪ್ರೇರಣಾ
ಪ್ರೇಮಕಾರಣಾ
ಇಗೋ ಕವನಾ—ಇಗೋ ಕವನಾ
ಕರ್ನಾಟ ದೇಶದ ಜನಾ
ಕನ್ನಡಿಸಿತು ಮನಾ
ಹಾಡಿತು ಕವಿಗಣಾ

* * * * *

ನೆನಸೇವು ನಿಮ್ಮ ಆ ನಗೀ
ಒಳಗ ಇಲ್ಲ ಧಗೀ
ಬರೇ ಬೆಳಕು—ಬರೇ ಬೆಳಕು
ನಿಂಮಾತು ಮಿಂಚಿನಽ ಗೆರಿ
ಎಲ್ಲಿ ಸರಿದೊರಿ
ಇಲ್ಲ ಅಳಕು—ಇಲ್ಲ ಅಳಕು

ನಿಮ ಕಾರ್ಯ—ಕಿರಿಬೆಳ್ಳಿನಾ ಸೆಲಿ
ಹಿಗ್ಗಿಧಾಂಗ ಹೊಳಿ
ಮುಂದ ಹರವು—ಮುಂದ ಹರವು

ನಿಮ್ ಹೃದಯದಾಗ ಇಲ್ಲ ಪಾಪ
ಶುದ್ಧ ನಿರ್ಲೇಪ
ಸದಾ ತೆರವೋ—ಸದಾ ತೆರವು

ನಿಮ ಚರಿತವಾಯಿತೋ ಕಥೀ
ಧರ್ಮನ ಗತೀ

ನಿಮ್ಮೊಲುಮಿಗಿಲ್ಲವೋ ನೆಲೀ
ಎಲ್ಲಿಯ ಬೆಲೀ

ವೈರಿಯನು ಕೂಡ ಒಳಗೊಂಡು
ಪ್ರೇಮವ ಕಂಡು

ಅಬಲೆಯರ ಬಾಲಕರ ಹಿಂಡು
ಮಾಡಿದಿರಿ ದಂಡು
ಮುರಿದಿರಿ ಭೇದದ ಸಂದು
ವಿಶ್ವದ ಬಂಧು

ನಿಮ ಸೋಲಿಗೂ ಕೊನಿಗೂ ಜಯಾ
ಯಾರಿಗಿದೆ ಭಯಾ
ನಿತ್ಯಕರುಣಾ—ನಿತ್ಯಕರುಣಾ

ನೀವಿಟ್ಟ ಒಂದೊಂದೂ ಅಡಿ
ಮುಕ್ತಿಯ ಗಡಿ
ಬಂಧಹರಣಾ—ಬಂಧಹರಣಾ

ರಾಮನಾಮದಾಗ ನಿಮ್ಮ ಪ್ರೇಮಾ
ಅದೇ ನಿಂ ನೇಮಾ
ಕೊನೀಮೊದಲು—ಕೊನೀಮೊದಲು

ಎಲ್ಲರಿಗು ಅವರವರः ರೀತಿ
ಬೇರೆ ಬೇರೆ ಪ್ರೀತಿ
ಇಲ್ಲ ತೊದಲು—ಇಲ್ಲ ತೊದಲು

ಬಟಾಬಯಲಿನ್ಯಾಗ ನಿಂರಾಜ್ಯ
ಮೋಸದ ಕೂಡ ವ್ಯಾಜ್ಯ
ಸುತ್ತು ದಾಳಿ—ಸುತ್ತು ದಾಳಿ

ನಿಂ ಚಢಾಯಿ ಮಾಡುವ ನೀತಿ
ಅಸಲ್ ನಿರ್ಭೀತಿ
ಹೇಳಿಕೇಳಿ—ಹೇಳಿಕೇಳಿ

ಛಲಬಲ ಇದ್ದು ಧೀರಾः
ಎಂಥ ಶೂರಾः

ಆಸಕ್ತಿ ಇಲ್ಲದಾ ವೀರಾ
ಪುಟ್ಟ ಪೂರಾः

ನಿಂ ಸ್ಮರಣ ಸ್ವರಾಜ್ಯದ ಹರಣಾ—
ದೀನ ಉದ್ಧರಣಾ
ನಿಂ ಚರಣ ದಾಸ್ಯ ಸಂತರಣಾ—
ದೃಷ್ಟಿ ವಿಸ್ತರಣಾ
ಸುತ್ತಿರಲು ತಿಮಿರದಾವರಣಾ—
ಆಶೆಯಾ ಕಿರಣಾ

ವರುವರುಷದ ಶ್ರಾದ್ಧದ ದಿನ
ಶ್ರದ್ಧೆಯ ಧನ
ಉಪ್ಪಿನ ರಿಣಾ—ಉಪ್ಪಿನ ರಿಣಾ
ತಿರಗತಃದ ನೂಲಿನ ರಾಟಿ
ಕವನ ಹೊಸ ಧಾಟಿ
ಕೇಳು ಸುಗುಣಾ—ಕೇಳು ಸುಗುಣಾ.

ನಿಂಗುಣ ಆಕಾಶದ ಚುಕ್ಕಿ
ಪಡೆಧಾಂಗ ರೆಕ್ಕಿ
ಕುಣಿತಾವ ಮುಂದ—ಕುಣಿತಾವ ಮುಂದ
ಅಂಬಿಕಾತನಯನ ಬಂಧ
ಸಮುದ್ರದ ಅಂದ
ಭಾವ ಭವನಾ—ಭಾವ ಭವನಾ
ಸ್ವಾತಂತ್ರ್ಯಜೇತ ಜಯಜಯಾ
ಹುಟ್ಟ್ಯಾ ನಿರ್ಭಯಾ
ದೇವಹವನಾ—ದೇವಹವನಾ
ಕವಿಹೃದಯ ದೀಪ್ತ ಭಾವನಾ
ಪ್ರೇಮ ಜೀವನಾ
ಕರುಣ—ಕವನಾ—ಸ್ಮರಣಕವನಾ.

————

# ನವಯುಗಾರಂಭ

ಸಂಕ್ರಾಂತಿಗೆ ಮರ ಬಿರಿಯೆ,
ಪಡುವಲ ಗಾಳಿಯು ಹರಿಯೆ,
ನನೆದೋರಲು ಮೈ ಮುರಿಯೆ,
ಶಿಶಿರದ ಮಾಗಿ,

ರಥವೇರಿದನಿನ್ನು ರವಿ.
ಕಣ್ತೆರೆಸಿದ ಯುಗದ ಕವಿ
ಬೇವಿನಲ್ಲು ಮೂಡಿತು ಸವಿ.
ಅಮೃತವು ತಾಗಿ.

ಭಾರತಹುಣ್ಣಿವೆ ಬಂತು :
ನಾನು ಮುಂತು ನೀನು ಮುಂತು
ಕಡಲು ಮೂರು ಮೊರೆವವಿಂತು
ಊದಿದೆ ಗಾಳಿ.

ಉತ್ತರೋತ್ತರೋತ್ತರೊಂದು
ಕೂಡಿ ಮೂಡಿದೆ ಚಿಗುರು ಬಂದು
ತುತ್ತುತ್ತೂತುದಿಗೆಂದೂ
ಮುಗುಳ್ನಗೆ ತಾಳಿ.

ಅಗಸ್ತ್ಯದೊಡನೆ ಆಯುದಯ
ಸಂಕ್ರಾಂತಿಗೆ ಇದೆ ವಿಜಯ
ಮಾಘವು ಸಾರುವದಭಯ
ಹೊಸದೋ ದಿನದಿನವು.

'ಮಾತೆ ಕೃತಿಯ ರೂಪ ತಾಳಿ
ಘೋಷ ಸಿದ್ಧಿಯಾಗಿ ಬಾಳಿ'
ತಮ್ಮ ತಾವೆ ಮೊದಲು ಆಳಿ
ಏಳಲಿ ಜನವು
ಜ್ಞಾನದಿ ಮತಮತವು ಕೂಡಿ
ರಸವು ಭಾವದಲ್ಲಿ ಮೂಡಿ
ದೈವಪೌರುಷಗಳ ಜೋಡಿ
ತಳಹದಿ ಕೃತಿಗೆ.
ಹಳ್ಳಿ ಹಳ್ಳಿ ಸಕಲ ಭೋಜ್ಯ
ಭಾರತವಿದು ಅವಿಭಾಜ್ಯ
ಜಗತ್ತೆಲ್ಲ ಏಕರಾಜ್ಯ
ಸಾರಲಿ ಶ್ರುತಿಗೆ.
ಅವರವರಿಗೆ ಅವರ ಹಾದಿ
ಪ್ರತಿಕಿರಣಕು ರವಿಯೆ ಆದಿ
ಸಪ್ತಸ್ವರಕು ಶ್ರುತಿ ಸನಾದಿ
ಸಂಗತಿಗೀತ.
ಸೌಜನ್ಯದ ಶಕ್ತಿ ಬೆಳೆದು
ಸತ್ಯದಲ್ಲಿ ಪ್ರೀತಿ ಮೊಳೆದು
ಆನಂದವೆ ರೂಪ ತಳೆದು
ಆಗಲಿ ಸುಪ್ರೀತ.
ಹೃದಯಸಮತೆ ಮೊದಲ ಪಾಠ
ಬಾಂಧವ್ಯವೆ ಜೀವದಾಟ
ಮೂರು ಮುಖಕು ಒಂದೆ ಪೀಠ
ಸಿಂಹದ ದಾರಿ.

ಆನೆಯಹಂಕಾರ ತುಳಿದು
ಕಾಮನ ಬಿಲ್ಲನ್ನು ಹಿಳಿದು
ಜಯಮಾಲೆಯ ಕರದಿ ತಳೆದು
ಬರುತಿರಲೇರಿ.
ತಕ್ಕಡಿಗೋ ಬೇಡ ಕಾಣಿ
ತೂಗುತಿರಲಿ ಸತ್ಯವಾಣಿ
ಕಣ್ಮುಚ್ಚಿಯು ನ್ಯಾಯರಾಣಿ
ಭಾಗ್ಯವ ಕೊಡಲಿ.
ಹೃದಯಕಮಲದೇಕಚಕ್ರ
ಮುರಿಯಲಿ ವಾಸನೆಯ ವಕ್ರ
ಉಷೆಯ ಹಣೆಗೆ ಬೆಳ್ಳಿ ಶುಕ್ರ
ತಿಲಕವನಿಡಲಿ.
ತಾಯಿ ಸಿಂಹವಾಹಿನೀ,
ಗಜಾಂತಲಕ್ಷ್ಮಿದಾಯಿನೀ
ಅತುಲೆ ಸರ್ವಸಾಹಿನೀ,
ವಿಶ್ವಮೋಹಿನೀ,
ಅರಳಿಸು ಹೃದಯಾರವಿಂದ
ಸಾವಿರದೀ ಏಕಬಂಧ
ಕುಣಿಯಲಿ ಸ್ವಚ್ಛಂದದಿಂದ
ನವಯುಗದಂದ.



# ಸಂಖ್ಯಾಂಕಿತ

ಹತ್ತಾಗೆ ಅಯ್ದಕ್ಕೆ ಅದರ ತೋಳ್ ತೊಡೆ ಅದಕೆ.
ನೀರರು ಪರಸ್ಪರರ ತಿರುಳು ನೆರಳು.
ಪಾಡುಪಟ್ಟಿತು ಕರುಳು, ರಾಗರಂಜಿತ ಕೊರಳು.
ತಂತಿಯಲಿ ಮೂಡಿಸಿತು ಒಲಿದ ಬೆರಳು.

ಕಳೆದರೂ ಕೂಡಿಸಿಯು ಗುಣಿಸಿಯೂ ಭಾಗಿಸಿಯು
ಒಂಬತ್ತು ಇಹುದು ಒಂಬತ್ತರಂದ.
ಅಂಕೆಯಲಿ ಸಂಖ್ಯೆಯಲಿ ಕೂಡಿಸಿಯು ಗುಣಿಸಿಯೂ
ಒಂಬತ್ತು ಏಗಳೊಂಬತ್ತರಂದ.

ಸೊಲ್ಲು ಎಂಬುದು ನಾದ, ಭಾವದಲ್ಲಿದೆ ಸ್ವಾದ.
ಸ್ವಗತವಿಲ್ಲದ ಮೋದ ಹೊಳಲುಗೊಡದು.
ಓಹೋ ನವೋನವದ ಸೊಬಗ ಬಣ್ಣಿಸಬಹುದೆ
ಒಂಬತ್ತು ತನ್ನತನ ತಾನು ಬಿಡದು.

ಎಂಟೆರಲ್ಲುಂಟು ದಿಗ್ಬಂಧವೆಂಬುವ ಚೆಂದ
ಘನವೆಷ್ಟೆ ಆದರೂ ಅಷ್ಟಕೋಣ.
ಮಲ್ಲಿಗೆಯ ಅಂಟು ಇದ್ದಂತೆ ನೇಹದ ನಂಟು.
ಮೈತುಂಬ ಆದಕುಂಟು ಮುಳ್ಳುತಾಣ.

ಏಳು ನೆಲೆಯಲ್ಲಿ ನೆಲಸಿಹುದು ನಿಲುವಿನ ನಲುಮೆ
ನಿದ್ದೆಗನಸುಗಳಲ್ಲೆ ಮುಗಿಯಿತೇನು ?
ಎದ್ದವರು ಗೆದ್ದವರು ಬಾಂದುಂಬ ಕಾಣುವರು
ಚುಕ್ಕೆ ತೊಟಗುಟ್ಟುತಿಹ ಬೆಳಕು—ಜೇನು.

ಆರೆ ಎನಬೇಡಣ್ಣ ಆರರೇ ಆರಾರೆ ?
ಕಣ್ಣಾರೆ ಮನವಾರೆ ಬಾಳಬೇಕು.
ನಾಡನ್ನು ಕಾಡೆಂದು ಬೀಳುಗಳೆವರೆ ಬೇಡ
ಕಟ್ಟಿ ಪಟ್ಟಣವನ್ನು ಆಳಬೇಕು.

ಕೈಯೊಳಿಲ್ಲವೆ ಕೈದು ಬದುಕು ಗೈಮೆಯ ಗೈದು.
ಅಯ್ದಕ್ಕೆ ಅಯ್ದೆ ಜತೆ ಹತ್ತಲುಂಟು.
ಮುತ್ತಯ್ದೆ ಮುತ್ತಯ್ದೆ ದಾಂಪತ್ಯವನ್ನೈದೆ
ಮರಮರಳಿ ಬೀಜವನೆ ಬಿತ್ತಲುಂಟು.

ನಾಲ್ಕು ಮೂಲೆಗು ಹಬ್ಬಿ ನಲಿವು ನಳನಳಿಸುವದು.
ಚಾತುರ್ಯ ಚಾರುತ್ವ ಚರಿತವೆಂದು,
ಒಂದೆ ನಾಲಿಗೆಯಲ್ಲಿ ರಸವಿಸರ ಪಸರಿಸಿದೆ.
ಪ್ರಕೃತಿ ಪೌರುಷ ಜಗದ್ಭರಿತವೆಂದು.

ಮೂರರೊಳಗಿದೆ ಒಂದು, ಕೇಂದ್ರದೊಳು ಬಾಹೊಂದು
ಸಂದು ಬಿಡದಂತೆ ಕಲೆಗೂಡಿಕೊಂಡು,
ಅಧಮ ಉತ್ತಮ ಮಧ್ಯಮವನು ಬೇರ್ಪಡಿಸಿದರು
ಓಂಕಾರ ಮಂಡಲದಿ ಶೂನ್ಯಚೆಂಡು.

ಎರಡಿಲ್ಲದೊಂದಿಲ್ಲ, ಒಂದಿರದ ಎರಡಿಲ್ಲ.
ಎರಕದಲಿ ಹುಟ್ಟುವದು ಒಂದೆ ಮೂರ್ತಿ.
ಅವಿಭಕ್ತ ಭಕ್ತಿಯಲಿ, ಸಮರಸದ ಶಕ್ತಿಯಲಿ
ಭಕ್ತ ಭಗವಂತರಲಿ ಒಂದೆ ಕೀರ್ತಿ.

ಒಂದರಲಿ ಹಲವುಂಟು, ಬೀಜಫಲಗಳ ಗಂಟು
ಪ್ರಸ್ತಾರ ವಿಸ್ತಾರ ಆಗುಹೋಗು.
ಕಂದ ಮಾಕಂದಗಳ ತೋಪಿನಲಿ ಮೆರೆಯುವದು
ಅಂಬೆಯಮ್ಮಾಯೆಂದು ಕರೆವ ಕೂಗು.

ಯಮನಿಯಮಗಳ ಗಂಟು ಮಾಯಾಮಯದ ನಂಟು
ವಾಮನಾಕಾರದಾ ಕುಬ್ಜನಂತೆ
ಹತ್ತೆಂದು, ನೂರೆಂದು ಸಾಸಿರದ ಲಕ್ಷವೋ
ಜೀವಕೋಟಿಯ ಕೊನೆಗೆ ಅಬ್ಜದಂತೆ.

---

# ಮಾತುಮೌನ

ದಿನದ ರವಿಯ ಪ್ರಭೆ ಚುಕ್ಕೆ ಚೂರಾಗಿ ದಿಕ್ಕು ದಿಕ್ಕಿನಲ್ಲಿ
ಸಿಕ್ಕಿಕೊಂಡಿತೋ ಕತ್ತಲಲ್ಲಿ ಇಕೊ ನಿಶೆಯು ನಕ್ಕಿತಿಲ್ಲಿ.
ದುಂದುಗಾರ ಚಂದಿರನು ಇಣಿಕಿದನು ಬೆಳಕೆ ಸಾಲದಾಗಿ
ರಸಿಕ ನೀತಿಯಲಿ ಬೆರೆಸಿ ಬಳಸುವನು ತಮನ ಸಾಲವಾಗಿ
ನಿದ್ದೆಯುಸಿರ ಶ್ರುತಿ ಹಿಡಿದು ಮೀಟುತಿದೆ ಮೌನವೀಣೆಯನ್ನು
ಕನಸು ಕುಣಿಸುವದು ಮನೋಮುದಿರೆ ಪ್ರಜ್ಞಾಪ್ರವೀಣೆಯನ್ನು
ಇರುಳ ಗಸಿ ಇಳಿದು ನಸುಕು ಮಿಸುಕಲಿದೆ ತುಪ್ಪ ತೇಲುವಂತೆ
ಕಸರು ಕಳೆದು ತಮ ಹಿಂಜಿ ಬಂತು ರವಿಕಿರಣ ನೂಲುವಂತೆ
ಕುಸು ಹಾಸಿನಲಿ ಹಕ್ಕಿ ಉಲಿಯುತಿವೆ ಬೇಲಿ ಬೇಲಿಯಲ್ಲಿ.
ಕುಸುಮ ಸೌಸವಕೆ ಭಾವ ದನಿಗಿಳಿಸಿ ಉಷೆಯ ಸಾಲೆಯಲ್ಲಿ.
ಮನವು ಮೌನದಲಿ ಹೆಪ್ಪುಗೊಂಡಿರಲು ಮಂಜು ದಿಣ್ಣೆಯಂತೆ
ರವಿಯ ಬಿಸಿಯ ಕಡೆಗೋಲು ಕಡೆಯೆ ಸಿಡಿದಿತ್ತು ಬೆಣ್ಣೆಯಂತೆ
ನಿನ್ನ ಕುರಿತು ಮಾತಾಡದಿರುವದೇ ಮೌನ ಯಜ್ಞವೆಂಬೆ.
ನನ್ನ ಬಣ್ಣನೆಯ ಸಣ್ಣ ಮಾತಿನಲು ನೀನೆ ಪೂಜೆಗೊಂಬೆ.

———

# ನೃತ್ಯಯಜ್ಞ

ಗಿರಿಶಿಖರದಿ ಶಿಖೆಯನೆತ್ತಿ ಶಿಖಿಯ ಕೇಕೆ ಕರೆವುದು :
" ಮೋಡ ಬಂತು ಮಿಂಚಿತಂತು ಗುಡುಗು ಮಳೆಯು ಬರುವುದು. "
ಜಗವೆಲ್ಲವು ಮೊರೆಯಿಡುತಿರೆ ಕುಣಿಯುತ್ತಿದೆ ಕೇಕೀ
ಸಖಿ ಸಂಮುಖ ತಲ್ಲೀನತೆಯಲಿ ಏಕಾಕಿ
ಹೇ ಶಿಖಂಡಿ ಹೇ ತ್ರಿದಂಡಿ ನಿನ್ನೊಡ ಚಾಮುಂಡೀ.
ತಾಂಡವಕ್ಕೆ ಹಾಸ್ಯಲಾಸ್ಯ ಬೆರಸುವ ರಣಚಂಡೀ.
" ದಿಕ್ಕು ದಿಕ್ಕು ಕತ್ತಲಿಸಿತು ಪ್ರಳಯವೆ ಇದು ಬಂತೇ
ಮುಳುಗಿಸುವದೊ ತೇಲಿಸುವದೊ ಕಾಲವೆ ಎಂಬಂತೆ. "
" ಥಕ ಥೈ ಥೈ ಧಿಕಿ ತಟತೋಂ ಇದೇ ತಾಲ ಮಳೆಯದೋ
ಹಳ್ಳಕೊಳ್ಳಗಿರಿದರಿಯಲಿ ಹರಿಯುತ್ತಿಹ ಹೊಳೆಯದೋ
ಬರಲಿಹ ಬೆಳೆ ಪಯಿರಿನಲ್ಲಿ ಕುತುಕದಿಂದ ಕುಣಿವುದೋ
ಋತುರಾಜನ ಋತಜಾತದ ಜೀವನದಲಿ ಋಣವಿದೋ
ಓ ಕುಮಾರ, ಬೇಗ ಬಾರ, ತುಂಬಿ ತಾರ, ಬೆಳೆಯನು.
ಕಾರ್ತಿಕದಲಿ ಭೂಮಿ ಕಾಂಬ ಶಾರದೀಯ ಕಳೆಯನು
ಆಹಾ ಸಖಿ, ಆಹಾ ಸುಖಿ, ಸಾವಿರ ಶಿಖಿ ಹೊತ್ತಿವೆ."
"ಕುಣಿಯೊ ಕುಣಿ ಸಹಸ್ರಮುಖೀ ಆಸೆ ತಲೆಯನೆತ್ತಿವೆ
ಅನ್ನ ಅನ್ನ ಬುಸುಗುಡುತಿದೆ ಮಾನವನಾಗರವು
ತೆರೆತೆರೆಯಲಿ ತೆರೆಯಿತು ನವ ದುಃಖದ ಸಾಗರವು
ತಾರಕ ಸಂಹಾರಕನಾಗುತ ಅಗೊ ಕಂದರ್ಪ
ದರ್ಪದಿಂದ ಹೆಡೆ ಸೆಡೆಯುತ ತಾಂಡವಿಸಿತು ಸರ್ಪ.
"ಶಕ್ತಿಕಂದ ಶಿವನಂದನ ಶಿಖಿ ಸ್ಕಂದನ ಕರೆವೆ
ವಾಹನವಾಗಲು ಅರ್ಪಿಸಿ ಅವನಲಿ ಮೈದೆರೆವೆ.

ಅಗ್ನಿದೇಹಿ ಆತ್ಮಸ್ನೇಹಿ ಬಾರೋ ಬಾಃ ಷಣ್ಮುಖಾ
ಚತುರಂಗದ ಚಾತುರ್ಯದ ಜ್ಞಾನಕರ್ಮಸಮುಸುಖಾ
ಶಿಖಿಗಂಡನೆ ಮೈಗೊಂಡನೆ ಕೆಂಗೆಂಡನೆ ತೋರೈ
ದೇವತೆಗಳ ಸೇನಾಪತಿ ಭೂರಂಗಕೆ ಬಾರೈ. "
" ಶಿಖೀ ಶಿಖಿ ಸಹಸ್ರನಖೀ ವರ್ಷಾವೀಣೆಯನೆ
ಬಾಜಿಸಿ ಪರ್ಜನ್ಯನ ಕರೆ ಅಂತರ್ಜ್ಞಾನಿಯೆನೆ. "
ಕಣಕಣದಲಿ ಕಣ್‌ಕುಣಿಯಲಿ ಪರಮೇಷ್ಟಿಯ ಕಂಡು
ಸಾಮುಷ್ಟಿಕ ಕ್ಷೇತ್ರದಲ್ಲಿ ವ್ಯಕ್ತಿಯ ಸುಖವುಂಡು
ಪಕ್ಕಸಮುದ ಠಾಯಿಯಲ್ಲಿ ಬಹುವಧು ಉದ್ದೀಪ್ತ
ಆ ತುರಾಯಿ ಕುಣಿಸಿ ಕುಣೀ ಓ ಪ್ರಾಜ್ಞಾ ಸುಪ್ತಾ.
ಅಕ್ಷರದೀ ಬ್ರಹ್ಮಕೃತ್ಯ ನಿತ್ಯದ ಈ ನೃತ್ಯ
ಚಿತ್ತದಲ್ಲಿ ಚಿತ್ರಿಸುತಿರೆ ಮರ್ತ್ಯವಹುದಮರ್ತ್ಯ.
ಪುರುಷನಿದಿರು ಪ್ರಕೃತಿ ಕುಣಿವುದೆಂದು ಸಾಂಖ್ಯಸೂತ್ರ
ಪ್ರಕೃತಿ ಸಾಕ್ಷಿ ಪುರುಷನಾಟ್ಯ ನವೋನವ ವಿಚಿತ್ರ.
ಇದೆ ಪೌರುಷ, ಇದೆ ಸೌರಸ, ಇದೆ ಚೌರಸವೆಂದು
ನೆತ್ತಿ ಹೊತ್ತ ಆತ್ಮಶಿಖಿಯ ಪರಿಣಾಮವ ಕಂಡು
ಬೇಸಗೆ ಸಖಿ ಶಿಖೆಗಂಡಿತು ಶತದಳಮುಖ ಉರಿಯೇ
ಹುಬ್ಬಿನ ಮಬ್ಬಿನ ಬಸಿರ್ ಬಂಗಾರದ ಬಾಯ್ದೆರೆಯೇ
ಗೌರೀಶಂಕರ ತಲೆಯೆತ್ತಿದೆ ಕೇತುವೆ ಎಂದೋ
ಧಿಮಿಕಿಡುತಿದೆ ಆ ಕುಮಾರಿ ಆ ಸೇತುವೆಯಿಂದೋ ?
ಹಾ ಭಯವೋ ಓ ನಿದ್ದೆಯೊ ಮಿಥುನದ ಒಲವೋ.
ರೌದ್ರದ ಮೊರೆ ಹೇಸಿಗೆ ಹೊರೆ ಮಾನವ ದಳವೋ.

---

# ನಾಳೆ ಎಂಬುವದು ಇಂದಿನ ಮನಸು

ನಾಳೆ ಎಂಬುವದು ನಿನ್ನಿನ ಮನಸು
ಮುಂದೆ ಎಂಬುವದು ಇಂದಿನ ಕಣಸು.

ಭೂತದಿಂದಲೇ ಭಾವವು ಬಂತು
ಭಾವವಿಲ್ಲದೇ ಉದ್ಭವವೆಂತು ?
ಕರ್ಮವಿಲ್ಲದಾ ಧರ್ಮವದೇಕೆ ?
ಧರ್ಮಧಾರಣೆಯು ಹೆಣಕ್ಕೆ ಬೇಕೆ ?
ಸತ್ ಎನ್ನುವದದು ಸತ್ತವಗಲ್ಲಾ
ಇರುವ ಭಾಗ್ಯವದು ಅರಿವವಗೆಲ್ಲಾ
ಪೊಳ್ಳು ಜೊಳ್ಳು ಅದು ಅಭಾವ ಶೂನ್ಯ
ಅದನ್ನು ತುಂಬಿದೆ ಪೂರ್ಣದ ಪುಣ್ಯ

ಗೊಳಲಿಯ ಒಳಗಿದೆ ಬೆಳೆಯುವ ಬೀಜ.
ಕತ್ತಲನ್ನೆ ಬಣ್ಣಿಸುವಾ ತೇಜ.

ಮೌನದಲ್ಲಿಯೆ ರಾಗವ ಬೆರೆಸಿ
ಛಂದದಲ್ಲಿಯೇ ಜಗವನು ಹರಸಿ

ಅನಂಗರಾಗದಿ ಅಂಗವ ಕುಣಿಸಿ
ಭೌಮದ ಪಾದಕೆ ಅಲ್ಪವ ಮಣಿಸಿ

ಒಲವಿಗೆ ನಲಿಯುವ ಅನಾದಿ ಮಿಥುನ
ಒಂದನೆ ನೂರೊಂದೆನಿಸುವ ರತುನ.

ತನ್ನನೆ ತಾನೇ ತಿಳಿಗೊಂಡಂತೆ
ಶಿವನ ಶಕ್ತಿಯೇ ಎಳಿಗೊಂಡಂತೆ
ಭಕ್ತಿಯಲ್ಲಿ ಭಗವಂತನ ಕಂಡಂತೆ

ವಿಯೋಗವೆಂಬುದು ವಿರಹದ ಬೆಂಕಿ
ಯೋಗರಹಸ್ಯದ ಮೊದಲನೆ ಅಂಕಿ

ಶಿವಕಲ್ಯಾಣವು ಕೂಡಲ ಸಂಗ
ರುದ್ರವಿಲಾಸವು ಜೀವನಭಂಗ.

---

# ಅ ಆ

ಜನಕೆ ಶಾಂತಿಯನು ನೀಡಲೆಂದು ಹೊರಟಿರುವ ಹಸಿಯ ಹುಡಗ;
ಗಾಳಿಗೆಷ್ಟು ಹರಿದೀತು ಹಾಹೆ ಹುಟ್ಟಿಲ್ಲದಾಗೆ ಹಡಗ?
ಕ್ಷೋಭೆಗೊಂಡು ಹುಚ್ಚೆದ್ದು ಹರಿವ ಹೇಳೆಲ್ಲಿ ನಿನ್ನ ನಲ್ಲೆ
ದಿಕ್ಕಿಲ್ಲದಂತೆ ಹರಿದಾಡುವವಗೆ ಚುಕ್ಕಾಣಿ ಬೇಡ, ಬಲ್ಲೆ.

ಆನೆಯೆತ್ತರಕೆ ಎದ್ದ ತೆರೆಗಳನು ನಾನು ಇದಿರುಗೊಂಡು
ನೂರು ಅಲೆಗಳಲಿ ಚಂದ್ರಕಲೆಗಳನು ಚೂರು ಚೂರು ಕಂಡು
ಪೂರ್ಣಬಿಂಬವನು ಕಾಣಲೆಂದು ಹಾಡಿದೆನು ಹೃದಯವೇದ;
ಬ್ರಹ್ಮನಾದ ತುಂಬಿರಲು ದನಿಯ ಕೂಡಿಸಿತು ಬ್ರಹ್ಮವಾದ.

ರಾಗದಲ್ಲಿ ಮೂಡುವನು ರವಿಯು ಅನುರಾಗದಿಂದ ಮುಳುಗಿ.
ನೆಲದ ಬೆಂಬಲಕೆ ನಿಲುವ ಕತ್ತಲವ ತಿಂಗಳಾಗಿ ಬೆಳಗಿ.
ಧ್ರುವದ ನೆಲೆಗೆ ತಲೆಗೊಟ್ಟು ತಿರುಗೆ ತಿರುಗುವದು ತಿರೆಯ ಪ್ರೀತಿ.
ಮಣ್ಮರದ ಕೆಚ್ಚು ಪ್ರತಿ ಸುಗ್ಗಿಯಲ್ಲಿ ಪಲ್ಲವಿಸೆ ಜಾತಿ ಜಾತಿ.

‘ಆ’ ಎಂದು ಬಾಯ ತೆರೆವುದಕು ಮೊದಲು ‘ಅಃ’
ಮೂಡಬೇಕು ಒಳಗೆ.
ಈಶಪ್ರಣಯದಲಿ ಸೃಷ್ಟಿಯಾಗುವದು ಪ್ರಣವನಾದ ವೊಳಗೆ.

---

# ಅಹನೆ

ಅಹ, ಅಹಹ ಅಹನೆ! ಗಹಗಹಿಸಿತೆಲ್ಲೊ ದೂರದ ದಿಗಂತದಲ್ಲಿ;
ಕುಲುಕುಲನೆ ನಗುತ ಕಿಲಿಬಿಲಿಸಿ ಉಲಿದು ಕಲರವವು ಮೂಡಿತಿಲ್ಲಿ.
ಕೋಗಿಲದ ಮೊದಲ ಕುಕಿಲೊಂದ ಕೇಳು ಕೂಗುವದು ಕೋಳಿಯೊಡನೆ;
ಬೆಳ್ಳಿ ಕರಗಿ ಬೆಳಗಾಯ್ತು ಏಳು ಹಗಲಾಗಿ ಭಗನು ಸುಡನೆ?
ಗಂಡು ಹೆಣ್ಣು ದಿನದಂತೆ ಎದ್ದು ದಿನದಾಟವಾಡುತಿರಲು
ನಿನ್ನೆ ನಾಳೆಗಳ ಸಂಧಿಯಲ್ಲಿ ಜನ ನೋಟ ನೋಡುತಿರಲು
ಗಂಗೆ ಯಮುನೆ ಕಣ್‌ಗೊನೆಗೆ ಇಳಿದು ಸುಖದುಃಖ ಹರಿಯುತಿಹುದು.
ಸರಸ್ವತಿಯ ಸಾಹಿತ್ಯದಲ್ಲಿ ದಾಳಿಂಬ ಬಿರಿಯುತಿಹುದು.
ಸಂಜೆಗೆಂಪ ನಾಚಿಸುತ ಬಂತು ದಾಳಿಂಬ ಬಿಂಬ ಒಂದು.
ಚಿನ್ನಿಸಕ್ಕರೆಯು ಬೆರೆಯೆ ಭರತಿ ಉಕ್ಕುವದು ಕ್ಷೀರಸಿಂಧು.
ಹಗಲುಗನಸುಗಳು ದಿಗಿಲುಗನಸುಗಳು ಬರಲು ಜಾತ್ರೆಗಾಗಿ
ಹೃದಯ ಹೃದಯಗಳ ಕೂಡಲಾಗುವದು ದೇವಯಾತ್ರೆಗಾಗಿ.
ಮಣ್ಣ ಮೈಯ ಮಗು ಮೂಡಿದಾಗ ಮಗಮುಗಿಸಿತಣ್ಣ ಮುಗಿಲು.
ಸೊಕ್ಕುಜವ್ವನದ ರಾತ್ರಿರಾಣಿ ಮುಸುಗುಡಿಸೆ ಆಯ್ತು ಹಗಲು.

———

# ಗೋವತ್ಸಲೀಲೆ

ಗೋವತ್ಸಲೀಲೆ ತೊರೆಕರೆಯ ಮೇಲೆ ವನವಾಟ ಸೆಜ್ಜೆಸಾಲೆ.
ಕೊಳಲಲೆಲ್ಲೊ ಉಲಿಯೆ ಹರಿನೀರು ನಲಿಯೆ ಎಲ್ಲೆಲ್ಲು ಭೃಂಗಮಾಲೆ.
ಇದು ಭೋಗಭೂಮಿಯೇ ಯೋಗಭೂಮಿ ಅರಿದೆಂದು ನೋಡುತಿದ್ದೆ.
ಕಲ್ಪನೆಯ ಬೊಗರಿ ತುದಿಬೆರಳ ತಿಗರಿ ಓ ಆಡುತಿತ್ತು ನಿದ್ದೆ.
ಹಸಿ ಹಾಲು ಕೂಡ ಬಿಸಿ ಎಂದು ಬಂದ—ತಾ ಬಾಲ, ಕೃಷ್ಣನಾಗಿ
ಕೆನೆಕೆನೆಯು ಎಂದು ಮುಖ ಚಾಚಿ ನಿಂದ ಆ ತಾಯಿ ಕೆನ್ನೆಗಾಗಿ.
ಬೆನ್ನೆ ಒರಗಿ ಹೆಗಲಲ್ಲಿ ಬಾಗಿ ಚಾಚಿತ್ತು ವತ್ಸವಲ್ಲಿ.
ಹೃದಯ ಕಂಚುಕವು ತೊಯ್ದು ಹನಿಸುತಿದೆ ತೊರೆದ ಹಾಲಿನಲ್ಲಿ.
ಸೋಮ ತಾರೆಯರ ಮೈತ್ರಿ ಕೂಡಿತ್ತು ಶಕ್ತಿ ನೇತ್ರದಲ್ಲಿ.
ಪುಷ್ಪದತ್ತ ಅರಳಿದನು ಒಲವಿನಲಿ ವಿಷದ ಪಾತ್ರದಲ್ಲಿ.
ಸತಿ ಮುಖದ ಸುಖಕೆ ಶಿವನಟ್ಟಹಾಸ ಕಡಲಾಗಿ ಉಕ್ಕುತಿತ್ತು.
ಧರ್ಮರೂಪ ವಾಕ್ಕರಣದಿಂದ ಶಿವಚರಣ ನೆಕ್ಕುತಿತ್ತು.
ಮಲ್ಲಿಕಾರ್ಜುನನ ಶಿಖರದಲ್ಲಿ ಮೂಡಿತ್ತು ಚಂದ್ರಬಿಂಬ.
ಬಯಲಾಗಿ ನಿಂತ ನಿರ್ವಾಣಮೂರ್ತಿ ನಗುತಿತ್ತು ಬಾಯಿತುಂಬ.

———

# ಅಪಾರ್ಥ-ಸಮೀಕ್ಷಕರಿಗೆ

ನನ್ನೀ ನುಡಿ ನನ್ನೀ ನುಡಿ
ದೇವರ ಒಡನಾಡಿ.
ಕಿಡಿ ಉದಿರಿಸಿ ಸಿಡಿವಿರಿಗೋ
ನೆರಳಿಗೆ ಬಡದಾಡಿ.
ಕೇಳದ ನುಡಿ, ಕಾಣದ ನಡೆ, ಒಳಿತಿಗೆ ಕಿಡಿಗೇಡಿ.
ಕನ್ನಡವಿದೆ ಕನ್ನಡಿಯಿದೆ
ಕಣ್ಣಿದ್ದರೆ ನೋಡಿ.

ಮುನಿಯದಿರಿ ಮೌನವಿರಿ
ಕಿವುಡರಿರಾ ಕುರುಡರಿರಾ, ಮೂಕತ್ವವು ಲೇಸು.
ಮೊಂಡರಿರಾ ಹೆಳವರಿರಾ,
ಕುಂಟುತ ಕುಣಿಯದಿರಿ
ಸಗ್ಗ ಸಗ್ಗ ಸಗ್ಗವದೋ ಅದು ಉರುಲಿನ ಹಗ್ಗ.
ನರಪೇತರ ನರಕದಲ್ಲಿ ಹೊಸೆಯದಿರೀ ಕಗ್ಗ.

ದುರ್ಮತಿಯಲಿ ಬಯ್ದಾಡುವ
ಓ ನಾಡಿನ ಬಂಧು!
ತಳೆಯಿದ್ದರೆ ಹೇಳುವೆನಿಗೊ
ಕಿವಿಮಾತನ್ನೊಂದು :

ಕಾಲಕ್ಕೂ ಕೊನೆಯೊಂದಿದೆ
ಉಳಿಸಿರಿ ಉಸಿರನ್ನು.
ಉದ್ಧತರೊಲು ಕೆಡಿಸುವುದೇ
'ಪ್ರಗತಿ'ಯ ಹೆಸರನ್ನು ?

ತಿಮ್ಮನೆ ಬೊಮ್ಮನೆ ಸುಮ್ಮನೆ
ಒರಲಿದರೇನರ್ಥ ?
ವ್ಯರ್ಥವದೋ ಅದು ಅನರ್ಥ ಅಯ್ಯ ! ಅಪಾರ್ಥ !

ನನ್ನೀ ನುಡಿ ತೆರೆ ಎದೆ-ಗುಡಿ
ದೇವರ ಬರಮಾಡಿ;
ಕಡಿದಾಡುವಿರೇತಕ್ಕಿದು ದೆವ್ವನ ಮುಂದೂಡಿ,
ನಾಗನ ನಾಲಿಗೆಯಾಡಿಸಿ ಅಣಗಿಸಿ ಹಿಂದಾಡಿ ?

ಒಕ್ಕಟ್ಟದು ಬಿಕ್ಕಟ್ಟು ಚೌಕಟ್ಟಿನ ಗುಟ್ಟು.
ತಿಳಿಯದೆ ನಾಡನು ಕಟ್ಟುವೆ
ಜೀವನ ಒಕ್ಕೊಟ್ಟು.
ಒಣಹಿಂಡಿಯ ಕೊಳುಣ್ಣುವೆ
ಎಳ್‌ನೆಯ್ ರಸಬಿಟ್ಟು.

ಗೆಳೆಗೆಳೆಯರ ಕನ್ನಡವಿದು
ಕನ್ನಡಿಗರ ನಾಡು.
ಜೀವಾಳದ ಉಸಿರೆತ್ತುತ ರಸನೇತ್ರದಿ ನೋಡು.

---

## ಭಕ್ತನಲ್ಲ ರಾಗಿಽ ವಿರಾಗಿಽ

ಭಕ್ತನಲ್ಲ ರಾಗಿಽ । ವಿರಾಗಿಽ ।
ಭಗವಂತನ ಭೋಗಿ ॥
ಅಹೋಹೋ । ಮಹಾವಿಶ್ವಯೋಗಿಽ ।
ಅಂತರಂಗವನೆ ನಾಟ್ಯರಂಗವನು ಮಾಡಿದ ನಟ ಜೋಗಿ ।
ಸಮತೂಕದ ತುದಿಯಲ್ಲಿ ತೂಗಿಕೋ ನೀ ಪ್ರೇಕ್ಷಕನಾಗಿ ॥
ಅಹಾ ರಸಿಕ ಜಾಣಾ ।
ಎಲ್ಲಿಯು ಹುಸಿ ದುಃಖವ ಕಾಣಾ ।
ಸಾತ್ವಿಕ ಹೃದಯದಿ ಪಾಕವಾಗುತಿದೆ ನಾಳಿನ ಸವಿಬಾಳು.
ಕತಕತ ಕುದಿವುದು ಕದನಸದನದಲಿ ಅಜ್ಞಾನದ ಗೋಳು.
ನೋಟವೋ ಆಗಿ ಹೋಳು ಹೋಳು.

ಹೊರಳಿ ನೋಡು ಮರಮರಳಿ ನೋಡು ಒಳಗರಳಿ ನೋಡು ನೋಟ.
ಅಮೃತವನ್ನೆ ಬಸಿರಲ್ಲಿ ತುಂಬಿಕೊಂಡಿಹುದು ಕಾಲಕೂಟ
ಅಹಾಹಾ ಏನಿದು ಹೊಸ ಆಟಾ ॥
ಹಮ್ಮು ಬಿಮ್ಮು ಹೊರೆ ಹೊರಗೆ ಇಳಿಸಿ ಬಾ ಹೆಡೆಯಂದದಿ ಬಾಗಿ
ತಲೆಯ ದಿಮ್ಮು ಇಳಿಸೀತು ಸುಮ್ಮನೇ ನೀ ಸೆಟೆದರೆ ತಾಗಿ
ಎಲೋ ಕ್ಷುದ್ರ ತ್ಯಾಗಿ ॥

# ಊರು ಮತ್ತು ಖಾಲ್ಡಿಯಾ

ಊರು ಮತ್ತು ಖಾಲ್ಡಿಯಾ
ಬಾಬಿಲೋನ ಅಸೀರಿಯಾ
ಮಡಕೆಚೂರು ಬಳೆಯ ಚೂರು
ಮಣ್ಣು ಹೊಟ್ಟೆ ಸೇರಿಯಾ ?

ಪೃಥು ಮೇದಿನಿ ಪರ್ಸಿಯಾ
ಅರ್ಯಯಾಣ ಹಿಂದಿಯಾ
ದೇವ ಅಸುರ ಆರ್ಯನಾರ್ಯ
ನಿನ್ನ ನೀನೆ ಕೊಂದೆಯಾ !
ಮತ್ತೆ ಬಂಧು ಎಂದೆಯಾ ?

ಎಲೋ ಎಲೋ ಯಲೋ ಚೀನು
ನೊಸಳೆಬಾಯ್ಗೆ ಸಿಕ್ಕ ಮೀನು
ಪ್ಯಾಸಿಫಿಕ್ಕಿನಾಚೆಗೆ
ಶಾಂತಿಯನ್ನು ಕಳೆದುಕೊಂಡು
ಎಸರು ಕುದಿವ ವೀಚಿಗೆ
ಎರಡು ಕಡೆಗೆ ಬೀಚಿಗೆ.

ಕುರುಕ್ಷೇತ್ರದೆರಡು ಬಣ
ವಿಜ್ಞಾನದ ತಟಿತ್‌ಕಣ.
ಮಾನವತೆಯ ಕೊರಳ ಸೂತ್ರ
ಹರಿಯಲು ಕಟಿಬದ್ಧರು.
ಗೆದ್ದರೋ ಬಿದ್ದರೋ
ಸತ್ತು ಬದುಕಿ ಇದ್ದರೋ.

ಸಿವಿಲಿಝೇಶನ್ ವ್ಹಲ್ಚರು
ಕಲ್ಚರೋ ಸೆಪಲ್ಚರು.
ನೆಲವೆಲ್ಲವು ಮಸಣ ಮಸಣ
ನೋಡಿದಲ್ಲಿ ಇಲ್ಲ ಹಸನ.

ಅತಳಾಂತಿಕ ಸಾಗರ
ಕುದಿಯುತಿದೆ ಸಳಮಳಾ
ಅತಳ ವಿತಳ ತಳತಳಾ
ಪಾತಾಳ ರಸಾತಳಾ
ಇದ್ದವರೂ ಸತ್ತವರೂ
ಅತ್ತರಲ್ಲೊ ಗಳಗಳಾ!

ಹುಗಿದುವೆಂದು ಬಗೆವರು
ನಾಳೆ ಅಗಿದು ತೆಗೆವರು.
ಅದು ಸಂಸ್ಕೃತಿ ದರ್ಶನ.
ಪಾಂಡಿತ್ಯ ಪ್ರದರ್ಶನ.

ಇದ್ದ ಜಗಳ ಸಾಲವೆಂದು
ಹಳೆದ ಹಡ್ಡಿ ತರುವರು.
ಈ ಕುರುಬರು ಬರುವರು.
ಎಲೊ ದುಷ್ಕೃತಿ ಮಾನವಾ
ಹೊಗಳಿಕೊಳುವೆ ದಾನವಾ
ನಿಲಿಸು ಕ್ಷುದ್ರಗಾನವಾ.

ಮರೆವಿನ ಮಾಗಡಲಿನಲ್ಲಿ
ತೇಲುತಿಹುದು ವೇದವು
ಆ ಅನಂತ ಭೇದವು.
ನೆತ್ತಿಯಲ್ಲಿ ಎತ್ತಿಕೊಂಡು
ನಡುಗುತಿಹ ವಿಶೇಷನು.
ಅವನೆ ಜೀವಶೇಷನು.

———

# ಸಮೃದ್ಧ

ತುಂಬಿ ತುಂಬೌ ಗಂಗೆ ಲೋಕಲೋಪವ ತುಂಬು
ಶಿಷ್ಟದುಷ್ಟರ ಕೊಡುಗೆಗಿರಲಿ ಬಾವುಲಿ ಕರ್ಣ
ಜಗದಂತರಾಳದಲಿ ನೀನೆ ಪೂರ್ಣಾತ್ ಪೂರ್ಣ
ಜೀವದಾನದ ದೀಕ್ಷೆ ತೊಟ್ಟಿಹುದು ನಿನ್ನಂಬು
ಹಳೆ ಕಹಳೆ ಆರ್ಭಟಿಸಲೇಕೆ? ಈ ಹೊಸ ಕೊಂಬು
ನಿನ್ನಿದಿರು ಬೇಕೆ? 'ಗಂಗಾ'ದೇವಿ ಎರಡೇ ವರ್ಣ
ಮಿಡಿದೊಡನೆ ಬಯಲು ಝುಮ್ಎಂದು ಮಿಂಚಿತು ಸ್ವರ್ಣ.
ಮಗುವಾಗಿ ಆಡುವೆನು ಮುಗ್ಧ ಸಾಕ್ಷಿಯ ನಂಬು.
ಆಹುದು ನೀನೆ 'ಸಮೃದ್ಧ' ಎಂಬೆ, ಅಬ್ಬಾ ಬಂಜೆ
ಬಯಲಲ್ಲಿ ತೂರುತಿದೆ ಉಸುಕು, ಕಣ್ಣೊಳು ಮಣ್ಣು—
ಅಂತರಿಕ್ಷಕ್ಕೆ ಸಾವಿರದ ಸಾವಿರ ಕಣ್ಣು
ನಿನ್ನ ನೆನವೇ ಬೆಳಕು ನನಗೆ ಮೂರೂ ಸಂಜೆ
ನಿನಗುಪಮೆಯೇ ತಾಯಿ ನೀನು ಕಳಿಯದ ಹಣ್ಣು.
ಸವೆಯದೀ ಸವಿ ಇದರ ಮುಂದೆ ಅಧರವು ನಂಜೆ.

---

# ಸೌಭಾಗ್ಯ

ಭಗವಂತ ! ಭಗಭಗನೆ ಉರಿಯುತಿದೆ ಪಡುವಲವು
ಶಾಂತಿಯನು ಕರೆಯುವದು ಹೇಗೊ ಹುಸಿ ಮುಸಿ ನಕ್ಕು
ಗೋಲಭೂಮಿಯ ನೆಲಕೆ ಎಲ್ಲೆ ಎಲ್ಲಿದೆ ದಿಕ್ಕು ?
ಎರಡು ಕಡೆಗೂ ಪೊತ್ತ ಉರಿ ಪುರಾಣಚ್ಛಲವು.
ಸಾರ್ವಭೌಮಿಕ ಕಾಕದೃಷ್ಟಿ ಶುಕ್ರನ ಒಲವು
ಎದೆಗೆ ಎದೆಗೊಟ್ಟು ಬದುಕುವಗೆ ಬಾಳುವ ಹಕ್ಕು.
ನಿನ್ನ ವಿಜ್ಞಾನ ಪಾನವ ಮಾಡಿ ಉಳಿದರೆ ನೆಕ್ಕು
ಜಗವು ಹಾಳಾದರೂ ನಿನಗೆ ಬೇಕಿದೆ ಗೆಲುವು.
ಸೌಭಾಗ್ಯಪದಕೆ ನೆಲೆ ? ಅದಕು ಕೋಶಕು ಗಂಟು.
ಭೂವಸುಂಧರೆ; ನೀನು ಅಮಲ ಸೌಭಾಗ್ಯನಿಧಿ.
ಕಾಯಲಿಟ್ಟೆದ್ದ ಕೈ ಕೊಲ್ಲಲಿರೆ. ಯಾವ ವಿಧಿ?
ಕಂಡಿಲ್ಲ ಕೇಳಿಲ್ಲ ಭೀತಿ ಪ್ರೀತಿಯನಂಟು,
ಜಗದ ಸೌಭಾಗ್ಯಕ್ಕೆ ನೀನೊಬ್ಬಳೇ ಸಾಕು.
ಉತ್ತಮರ ಬೆಳೆ ಬರಲು ಬೀಜ—ಮನು ಬರಬೇಕು.

———

# ‘ ಸಕಲ ’

ಎಷ್ಟು ಶಕಲವ ಕೂಡಿಸಿದರೆ ಇಡಿ ಒಂದಾದೀತು ?
ಕಂಸಕಂಸಾತ್ಮರಿಗೆ ಕೃತ್ಸ್ನನಾಮುವಪಥ್ಯ;
ಆದರೂ ಇಂದಿಗೂ ಜಗವಖಂಡಿತ ಸತ್ಯ,
ಕಿಡಿಗೇಡಿ ಕಿಡಿ ಬಂತು ತಿಕ್ಕಿ ಮಾತಿಗೆ ಮಾತು.
ವಿಕಲ ಬುದ್ಧಿಗೆ ಸಕಲ ಎಟುಕದಿದೆ. ಅದು ಸೋತು
ಕಟುಕ ಬುದ್ಧಿಗೆ ಶರಣು ಮಾಡಿ ಕುಳಿತಿದೆ ಸದ್ಯ.
ವಿಜ್ಞಾನಿಗಳ ‘ಅಕಲು’ ಹೃದ್ಯವಿದ್ದರು ವಧ್ಯ.
ಸೌರಪಥದಲಿ ಧೂಮುವೆದ್ದು ಮೂಡಿದೆ ಕೇತು.
ಭೂ ವ್ಯೋಮ ಪಾತಾಳ ಒಂದಾಗಿ ಹೆಣೆದಿರುವೆ
ಓ ಗಂಗೆ, ರಸಲಹರಿ ಸಹಜ ಸಹಜ ಅಭಂಗಿ
ಈ ವಿಶ್ವಮಾನವರ ದೃಷ್ಟಿಯೇ ಏಕಾಂಗಿ
ಕಲಿಸು ನಿನ್ನಾ ಕಲೆಯ ವಿಶ್ವಂಭರೇ ಗುರುವೆ !
ಭಣಿತಿ ಭಂಗಿಗಳಲ್ಲಿ ಮುಗಿದು ಕುಂಠಿತ ಮತಿಯು
ಮತ್ತೆ ತಲೆಯೆತ್ತಿ ನಿಂತಿಹುದು ದಿತಿಸಂತತಿಯು.

———

# ವಸುಧಾ

ನೀ ವಸುಂಧರೆ ನಿನ್ನ ಪ್ರಿಯನೆ ಆ ವಸುದೇವ
ಈಶ ವಸತಿಗೆ ಇಳಿದುಬಂದ ನಿನ್ನುದರದಲಿ
ವಾಸುದೇವನು ಆಗೆ. ಮುತ್ತುದುರಿ ಅಧರದಲಿ
ಸರ್ವಸಂತಾಪಹರವಾಯ್ತು ಗಂಗಾ—ಭಾವ.
ನೆಲಕೆ ನೀರೇ ಗತಿಯು; ನೆಲ ನೀರಿಗಾಧಾರ.
ಮಣ್ಣು ನೆಲದಲ್ಲಿ ಭವ ಬರಲು ಮಾಸುವದೆ ಗುಣ ?
ನೀರೆ ಮಡಿ; ಅದರಲ್ಲಿ ದೋಷ ಕಂಡವ ಪಿಸುಣ.
ಇಬ್ಬರೀ ಜತೆ ಸಖ್ಯ ವತ್ಸಲತೆಯಾ ಹಾರ.
ನೆಲ ಒಂದು ಜಲ ಒಂದು, ಬೆಳಕು ಗಾಳಿಯು ಒಂದು
ಬಾನೊಂದು ತಾನೊಂದು, ಮಡಕೆ ಹುಟ್ಟ್ಯಾ ಒಡಕು.
ಒಡಲೊಡವೆಗಳ ತೊಡಕು ಜಗಕೆ ಮೂಡಿದೆ ಕೆಡಕು.
ನಿನ್ನಂತೆ ಪರರಾತ್ಮ ಕಂಡು ಘನತೆಯ ಹೊಂದು—
ನೀರು ನೆಲಗಳ ಕರುಳ ಬಳ್ಳಿ ಹರಿದೀತೆಂದು
ಈ ಉಸಿರು ಕಂಡೀತು ಒಂದೆ ಬೆಳಕನ್ನಂದು.

————

# ‘ ಕಿಮಪಿ ತತ್ ’

ಅಹುದು ಏನೆಂದು ವರ್ಣಿಸಲಿ ಆ ಮಹಿಮೆಯನು
ಅನುಭವಿಸಿದಾ ಕವಿಯೆ ‘ ಕಿಮಪಿ ತತ್ ’ ಎಂದಾಗ್ಗೆ
ಜೀವ್ಹೆ ಲಾಲಾಲೋಲ, ಕಂಪ ಜೊಂಪಿಸಿತು ತನು
ನಿನಗು ತಿಳಿದೀತು ಆ ಅನುಭವವು ಬಂದಾಗ್ಗೆ.
ಶಿವನುತ್ತಮಾಂಗದಲಿ ಶಶಿಯು ಬದಿ ನಿಂದಾಗ್ಗೆ
ಶುದ್ಧಕೂ ಅದು ಶುದ್ಧದುದ್ದಕೂ ಪರಿಶುದ್ಧ
ನೀಲವನು ಹರಿದು ನೆಲವನು ತೆರೆದ ಈ ಬುದ್ಧ.
ಸಿರಿಗಂಗೆಯಲ್ಲ ಬರಿ ನೀರು ಸೋರುವ ಬುಗ್ಗೆ.
ನೆನೆನೆನೆಸಿದಂತೆ ಈ ಧ್ಯಾನ ಒಳಗೇ ಮುಳುಗಿ
ಅರಿವಿನ ರಸಾತಳವ ಸೋಕಿ ಬಂದಿತು ಕರಣ.
ಉದಯಾಸ್ತವಿಲ್ಲದಿರೆ ಮೂರು ಲೋಕದ ಹರಣ.
ಹಗಲು ಚುಕ್ಕೆಯ ಹಾಗೆ ಆ ಸಮಂತಾತ್ ಬೆಳಗಿ.
ಪ್ರಿಯನಿದಿರು ಬಂದಾಗ ಮೂಕ ಮಧುರವು ಭಕ್ತಿ
ಈ ಬೆಳಕ ಬಣ್ಣಿಸಲು ಯಾವ ವರ್ಣಕೆ ಶಕ್ತಿ?



# ಸ್ಥಿರೆ—ತಿರೆ

ಇವಳು ಸ್ಥಿರೆ, ಇವಳೆ ತಿರೆ ಸಂಚಾರದಲಿ ಸ್ಥಾಯಿ,
ಬೆಳೆಯುತಿರೆ, ರಸ ಒಸರಿ ಬರೆ, ಸೃಷ್ಟಿ ಹಿಗ್ಗುತಿದೆ.
ಆಗೊ ಅಲ್ಲಿ ಆ ಧ್ರುವನೆ ತಾ ಪ್ರದಕ್ಷಿಣವಾಗಿ
ಜಗದ ನಾರಾಯಣಗೆ ನಮಿಸುವನು ಭಕ್ತಿಯಲಿ.
ಅನಿಮಿಷರ ಗಣ ಸುತ್ತುಗಟ್ಟಿ ಕಾಯುತ್ತಲಿವೆ,
ಗ್ರಹಗತಿಯು ಯುಗಯುಗಗಳಲ್ಲಿ ವಿಶ್ರಾಂತಿ ದೊರೆ-
ಯದೆ ತಿರುಗುತಿದೆ, ತನ್ನ ಸಂವಾದ ಸೌಂದರ್ಯ
ಧರ್ಮಕ್ಕೆ ಸೋಲುತಿದೆ, ಸತ್ಯವೇ ತೇಲುತಿದೆ.

ಧರ್ಮ ಸೋತಿತು! ಮುಳುಮುಳುಂಗಿದ ಹಾಗೆ ತೋರಿತ್ತು
ಆ ಸತ್ಯ. ನಾವೆ ಮುಳುಗಿದ ಮೇಲೆ ಹೆಣಗಳೇ
ತೇಲಿದರು, ಯಾವನೊಬ್ಬನು ಈಸಿ ಜೈಸಿದರೆ
ಅದು ಹಬ್ಬ. ಅವನೆ ಮುಂದಿನ ಮನುವು ಓ ಜನವೆ
ದಿನವುದಿಸಿದಂತೆ ಮರಳೀತು ಸುಚಿರಂತನವು.



# ಮಧುವಾತಾ ಋತಾಯತೇ!

೧

ಬರಿವಿನಲ್ಲರಿವು ಕಣ್ತೆರೆವುತಿರೆ
ಮೈದೋರಿತ್ತು ಇರವು. ಹಿಗ್ಗಿನ ಹರವು.
ಬರಡು ಹಯನಾಗಿ,—ಕರುವ ಪಡೆದಿತು ಆವು.
ಭೌತದ ಹರಳು ಹರಳು ವಿಶ್ವವಲ್ಲಿಯ ಹೂವು.
ಆ ಆಮೋದ ಆ ಎಂದು ಮೂಸುವರು ನಾವೂ ನೀವು.

ಓ ಯಕ್ಷಿ, ದೇವತಾನಾಟ್ಯಮಂದಿರದ ಅನಿಮಿಷ ಸಾಕ್ಷಿ.
ಮೌನಿ ಶಿವನೊಡನೆ ಬಾ ರಸವ ರುಚಿಸುವ ಪಕ್ಷಿ!
ಹಿಡಿಸದನುಭಾವಕ್ಕೆ ಬೆರಗು ಸೂಸಿತು ಅಕ್ಷಿ.

ಅದ್ಭುತದ ಉದ್ಭವದ ಭಾವ ಭಾಷಾಂತರಿಸಿ,
ಹೊಸ ಒಸಗೆಗನುವಾಗಿ ಒಗ್ಗಿ ವೇಷಾಂತರಿಸಿ,
ತಾ ಶೈಲಿ ಎಂದೊರೆವೆ ಕರ್ಮನಟಿಯನುಕರಿಸಿ;
ಅವಳ ಪದಹತಿಗೆ ಎದ್ದಾವು ಛಂದದ ಬಳ್ಳಿ.

ಭಾವಸೋಪಾನವನ್ನೇರಿ ಬಾ ಪ್ರಾಣಸಖಿ,
ದರದಲತ್ ಅರವಿಂದ–ಸ್ಮೇರಮುಖಿ,
ಖಗವು ಸುಖಿ, ಮೃಗವು ಸುಖಿ, ಜಗವು ಸುಖಿ, ನಗವು ಸುಖಿ.

ನಕ್ಷತ್ರ ಕಣ್ ಚಿವುಟುತಿವೆ, ಗ್ರಹಗೋಲ ಕುಣಿವುತಿವೆ.
ಅಗೊ ಕಂಪಿಸಿತು ಕಡಲು ಧ್ರುವಪದದ ಶ್ರುತಿಯನು ಹಿಡಿದು
ವಸಂತಾದಿಯಾಗಿ ಋತುಮಾನ ಬರುತಿವೆ ನಡೆದು,
ಅಲ್ಲಲ್ಲಿ, ವಿಲಾಸ ಲಾಸ್ಯದಿ ತಡೆದು.

ಶ್ರುತಿಗಗೋಚರ ರಾಗ ತಾನಪೂರ್ವಕೆ ಉದಿಸಿ
ಗುಮ್ ಗುಮ್ ಗುಮ್, ಓಹ್ ಘುರ್ಮಿಸುತ್ತಿದೆ ಮದಿಸಿ.
ಮಧುರಾಣಿ ! ಸಂಭ್ರಮದಿ ಮಕ್ಷಿಕಾಮಾಲೆ
ಅಕ್ಷರ ಮಾಲೆಯಂತೆ ವರ್ಣವರ್ಣದಿ ಗುಣಿಸಿ ಕುಣಿಸಿ.
ಯಾವ ವೃಕ್ಷಕೆ ನಡೆದೆ ಎಲ್ಲಿಹುದು ಆ ಹುಟ್ಟು?
'ಗುಟ್ಟು! ಗುಟ್ಟು!' ಒಟಗುಟ್ಟು, ನಾನಿರೆನು ನಿನ್ನನು ಬಿಟ್ಟು
–ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ–

೨

ಏನಲ್ಲಿ ಝಂಝಾವಾತ, ಓ ಏನೋ ಅಧಃಪಾತ !
ಎಂಥದೋ ಉತ್ಪಾತ ! ಸೈಂಧವರ ಲಾವಣ್ಯ
ಮಣ್ಮಣಸು. ಮಣ್ಣುಗೂಡಿತು ಕಣಸು.
ಹೈಕಿ ನೈ ! ಹೈ ಕಿ ನೈ! ನಹಿ ! ನಹಿ ! ಹಯ್ ಹಯ್—
ಅಲ್ಲದುದನಹುದೆಂಬ ಅಜ್ಞಾನಿಯೊಡನಾಟ
ಕಲ್ಲು ಹಾಯ್ದಂತೆ–ಸೈ ಎಂದಿತಾಗ

ಏಕಾಕ್ಷ ಒಂಟೆಯ ಸಂಘ, ವಿಶ್ವಕೋಳಿಯ ಕೇಂದ್ರ–
ದೀಶ್ವರನು ಪ್ಲುತವನನುಕರಿಸಿ ಕುಕ್ಕುಕ್ಕೂ ಽಽ ಎಂದ.
ಸರ್ವೋದಯಕೆ ಇದುವೇ ಛಂದ.
ಬಂತು ಸೇಂಟಿನ ಗಂಧ, ಚುಯ್ ಎಂದ ದೋಸೆಯ ಅಂಡ.
ಏನು ಕೋಲಾಹಲವು ? ಓ, ವರ್ತಮಾನದ ಸುದ್ದಿ !
ಎಲ್ಲೊ ಗಲಾಟೆ, ಖೂನು, ದರೋಡೆ,
ಚಕ್ರಬಂಧದ ಒಗಟು, ರಾಶಿಭವಿಷ್ಯ, ಲೂಟಿ, ಲಾಟರಿ,
ಪಾನನಿರ್ಬಂಧ, ಬಂಧಿತರ ಕೈಬಿಸಿಯಾಟ,
ಚುನಾವಣೆ, ಅಧ್ಯಕ್ಷ, ಇಲಿ–ಬಲೀ–ಸಾಹೇಬ
ಬೂಟು ಹ್ಯಾಟಿನ ಸೂಟು ಒರಸಿಲ್ಲ; ಅದೆ ಥೇಟು;
ಹಾಟೇಲು, ಹಾಡಿದ ಹಾಡು, ಬಾನುಲಿಯ ಕಿರಿಚಾಟ,
ಸಿನಿಮಾ ಬ್ಯಾಂಡು, ಹಿಂದೆ ಹುಡುಗರ ದಂಡು.
ಸೇದಬೇಡಿ,–ಸೇದಿದರೆ ಬೇಂದ್ರೇ ಬೀಡಿ—
Pay your fare, Do not spit.
ಕಿರ್ ಎಂದು ಖಿಡ್ ಎಂದು ಥಡ್ ಎಂದು
ತಪ್ಪಿತು,–ಎಕ್ಸಿಡೆಂಟು–ತಪ್ಪಿದ್ದುದೂ ಎಕ್ಸಿಡೆಂಟು.
ಯಾರೊ ಯಾರನೊ ನೋಡುವಾಗ ಮೂಡಿತು ನಂಟು
ಹಾದಿಯಲ್ಲಿ ಬಿದ್ದಿತು ಗಂಟು–ಹೊತ್ತರಗೊ ಗಂಟು
ಬಡಿಯಬೇಡಿ ಪಂಟು, ಬೇಡಯ್ಯ ಕಂಪ್ಲೇಂಟು
ಹೋದದ್ದೆ ಸಾಲದೇ ? ಸಾಲ ಹುಟ್ಟಿದು ಈಗ
ಸಾವುಕಾರನ ಕೂಡ ಸಾಲಗಾರನು ಸತ್ತ;
ಅದಕೆ ಕಮ್ಯುನಿಸ್ಟ್ ಅತ್ತ ! ನೋಡಿತ್ತ;
ಅಬ್ಬಬ್ಬ ಏನು ಕ್ಯೂಽಽಽ ಒಬ್ಬರಾ ಮೇಲೊಬ್ಬ.
ಇದುವೆ ಹುಚ್ಚರ ಹಬ್ಬ ! ಎಚ್ಚರ ! ಕ್ಷಮಿಸಿ

ಅಯ್ಯಾ, ಸ್ವಾಮಿ, ನಿಮ್ಮಂತೆ ನಾನೊಬ್ಬ.
ನಡೆ ಮುಂದೆ ಶೋ ಮುಗಿದೀತು. ಕೇಳು ಗಾಡಿಯ ಕೂಗು.
ಆಯ್ತು ನಿನ್ನಿನ ತೇದಿ, ನಾಳಿನ ಹಾದಿ ನಿನ್ನೆ ತರೀಖು.
ಹಾದೀs ಗೀದೀs ಓ ಅಪ್ಪಾ ತಟ್ಟ್ಯಾಗು....
ಎಲ್ಲೋ ಮಲಗು, ಇದ್ದವಗೆ ಎಚ್ಚರ ಚಿಂತೆ—
ಮನಚಿತ್ರಪಟವು ಮಸಣದ ಪಾಟಿ.
ಹಿಡಿ ಮತ್ತೆ ಹಿಂದಿನ ಘಾಟ, ಗಿರಣಿಯ ಬಂಬು ಕರೆಯುವದು
ಏಳು ! ಆಯಿತು ಏಳು.
'ಲಟಪಟೀ ಸಂಸಾರ'—ಲಾವಣಿ ಹೇಳು—
Interval ಓ ಏನು ಕಲ್ಲೋ!
ಕಲ್ಲುಕೋಳಿಯು ಕೂಗುವನಕ ಕಲ್ಕಿಯು ಬರನು.
ಖೇಲ್ ಖಲಾಸ್. ಚಪ್ಪಾಳೆ ಬಡಿಯಿರಿ ಇನ್ನು.
ಸಭ್ಯತೆಗೆ ಹತ್ತಿದೆ ತೊನ್ನು. ಮಣ್ಣು-ಹೆಣ್ಣೂ—ಹೊನ್ನು.
ಥ್ರೀ ಚಿಯರ್ಸ್ ಫೊರ್ ಪೀಸ್ ಆ್ಯಂಡ್ ಫ್ರೀಡಮ್ ಅನ್ನು
ಇಲ್ಲವೋ ಕಾಸಿರು ಬೆನ್ನು.

೩

ಅನಿರುದ್ಧ ಶಾಂತಿ ತಳಹದಿಯು ಅದುವೆ ಸಾಕ್ಷಿತ್ವ ಪ್ರಾಣಲಿಂಗ.
ಪ್ರದ್ಯುಮ್ನ ಕೃತಿಯು ಮೂಡೀತು ಮುಂದೆ ನಿಃಸಂಗ ಶರಣರಂಗ.
ಸಂಕರ್ಷಣಾಖ್ಯ ಜಯದೇವ ತರುವ ಮಹಲಿಂಗ ಭಾಗಭೋಗಿ.
ಶ್ರೀ ವಾಸುದೇವ ಮಾಯಾವಿ ಬರಲು ಲೀಲಾವತಾರಿಯಾಗಿ.
ಬಿಡಿಗಾಳು ಬದ್ಧ; ಇಡಿ ಹಣ್ಣು ಸಿದ್ಧ; ಬಯಲಲ್ಲೆ ಇರುವ ಬುದ್ಧ.
ಏಕಾಕ್ಷ—ಪಕ್ಷ, ಕೌಟಿಲ್ಯದಕ್ಷ ನಡೆಸಿಹರು ಭೂಮಿಯುದ್ಧ.
ಹಳೆಯಪಸು ಬಿದ್ದ ಹೊಸಹೊಸಬ ಗೆದ್ದ, ಕೋಡಂಗಿ ನಡುವೆ ಎದ್ದ.
ನವೋನವದ ಬಯಲಾಟ ಭಾರಿ ತಾಂಡವವೆ ರಾಷ್ಟ್ರದುದ್ದ.

ಫ್ರಾಡು, ಮಾರ್ಕ್ಸ್, ಆಡ್ಲರು ಜುಂಗು, ಮೇಲೀಗ ಐನಸ್ಟೀನು.
ಕ್ಯಾಪಿಟಲ್ಲು ಏನು? ಆ್ಯಟಮ್ಮು ಬಾಂಬು, ತಲೆತುಂಬ ತಿಂಡಿ, ಹೇನು!
ಬಾಯಲ್ಲಿ ಶಾಂತಿ, ತಲೆಯಲ್ಲಿ ಭ್ರಾಂತಿ, ಸಂಕ್ರಾಂತಿ ಎದೆಯ ತುಂಬ.
ಚಂಡಮುಂಡರಾ ಹಳೆಯ ದಂಡು ಅಭಿನವ ನಿಕುಂಭ ಕುಂಭ.

ಸುಂದೋಪಸುಂದರಾಖ್ಯಾನ ಮತ್ತೆ ಜನಜಾತ್ರೆ ಯಕ್ಷಗಾನ
ನವಭಾಗವತರೆ ಬಲ್ಲವರು ಅದರ ಆ ವಿಷಮ ತಾನಮಾನ.
ಹೊಡೆಗಾಡಿ ಮುಂದೆ, ಫಾಲ್ಗುನವು ಹಿಂದೆ, ಆ ಮುಂದೆ ಚೈತ್ರದುದಯ.
ನೀ ನಗುವೆ ನನಗೆ, ನಾ ಬಿಗಿವೆ ನಿನಗೆ, ಇಬ್ಬರಿಗು ಸುಪ್ತ ಹೃದಯ.

ಕ್ಷಣವೊಂದು ಮೌನ ಇಹದೆಂದು ನಿನಗೆ ತಿಳಿದೀತು ಎಂದು ಬಂಧು.
ತೆರೆಮರೆಯ ಕೆಳಗೆ, ಇಲ್ಲದರ ಒಳಗೆ, ಗಂಭೀರ ಭಾವಸಿಂಧು.
ಇದು ಯಾವ ಧಾಟಿ ಕಿರಿಚಾಟ ಪಾಟಿ ಪೈಶಾಚ್ಯನೃತ್ಯಬಂಧ.
ಹುಳಿಜೊಟ್ಟೆ ಮಧ್ಯ, ನಿನಗಹುದೆ ಹೃದ್ಯ?–ಗಂಧಕದ ಸುಡುವ ಗಂಧ?



# ಓ ಚಾರ್ವಾಕು !

ಚಾರ್ವಾಕು ! ನೀನು, ಕಾರ್ಮಿಕರ ಗಂಡ, ಧಾರ್ಮಿಕರ ಮಿಂಡ ಅಬ್ಬಾ !
ಕಳ್ಳಸಂತೆ ಸಿರಿವಂತ ಸಭ್ಯರಾ ನರ್ಮಸಚಿವನೊಬ್ಬಾ
ಅಪ್ಪ ಶಿಕ್ಷಿತನು, ಅವ್ವ ಧೂರ್ತೆ, ಅಂಥವರ ಮಗನು ನೀನು.
ಕ್ಷಣಿಕ ಬಾಳು ತಾತ್ಪೂರ್ತೆ ತರ್ಕ; ಆ ನಿಜದ ಗೊಡವೆ ಏನು ?

ದಂಡ ತಪ್ಪಿಸುತ ಪಿಂಡ ಗಳಿಸಿ ಉಂಡಾಡಿ ಭಟ್ಟನಾಗಿ,
ಯಾರ ಮಂತ್ರಿಯೋ, ಯಾರ ತಂತ್ರಿಯೋ, ಶಿಷ್ಟಧಿಟ್ಟನಾಗಿ,
ಕೀರ್ತಿಯಿರಲಿ ಅಪಕೀರ್ತಿಯಿರಲಿ ದಿನ ವರ್ತಮಾನದಲ್ಲಿ,
ದಪ್ಪ ಅಕ್ಷರದ ಪದವಿ ಪಡೆದು ಇಹೆ ಮೇಲುಸಾಲಿನಲ್ಲಿ.

ಹದಿನೆಂಟು ಜಾತಿ ಹದಿನೆಂಟು ನೀತಿ ಹದಿನೆಂಟು ಕಾರಭಾರಾ
ಅಠರಾ ಕಚೇರಿ ಅಠರಾ ವಿಚಾರಿ ತೀಂತೇರ ನೌ ಅಠಾರಾ.
ಚೌರ್ಯ್ಯಾಂಶಿ ಲಕ್ಷ ಯೋನಿಯಲಿ ತಿರುಗಿ ಆಸನವ ಕಲಿತೆ ನೀನು.
ಚೌಸಷ್ಟಿಕಲೆಯ ತಿರಸಷ್ಟಿ ನಿನಗೆ ನಾ ಬೇರೆ ಹೇಳಲೇನು ?

ಛಪ್ಪನ್ನ ದೇಶ ಛಪ್ಪನ್ನ ಭಾಷೆ ಏನೇನೊ ಗಂಟುಹಾಕಿ,
ಹಿಂದಿಯನು ಮುಂದೆ ಗುರಿಮಾಡಿ ಹಿಡಿದೆ ಬೆದರಿಕೆಯ ಆ ತುಪಾಕಿ;
ಬ್ರಹ್ಮಾಂಡವಾದಿ ಗೃಹಭೇದಿ ನೀನು ಕಾಂಬುದಕೆ ಅತಿ ಉದಾರ;
ಬಲೆಯೊ ಉರಲೊ ಬೀಸಿರುವೆ ಸುತ್ತ ನವನೀತಿ ಸೂತ್ರಧಾರ.

---

# ಕರಡಿ–ಕುಣಿತ

ಕಬ್ಬಿಣ ಕೈಕಡಗ, ಕುಣಿಕೋಲು, ಕೂದಲು
ಕಂಬಳಿ ಹೊದ್ದಾಂವ ಬಂದಾನ –
ಗುಣುಗುಣುಗುಟ್ಟುತ ಕಡಗವ ಕುಟ್ಟುತ
ಕರಡಿಯನಾಡಿಸುತ ನಿಂದಾನ!

ಯಾವ ಕಾಡಡವಿಯಲಿ ಜೇನುಂಡು ಬೆಳೆದಿದ್ದ
ಜಾಂಬುವಂತನ ಹಿಡಿದು ತಂದಾನ?
'ಧಣಿಯರ ಮನಿಮುಂದ ಕಾವಲು ಮಾಡಣ್ಣ
ಧಣಿ ದಾನ ಕೊಡುವನು' ಅಂದಾನ.

ತ್ರೇತಾಯುಗ ರಾಮನ್ನ ದ್ವಾಪರದ ಕೃಷ್ಣನ್ನ
ಕಲಿಯುಗದ ಕಲ್ಕೀನ ಕಂಡಾನ
ಜಾಂಬು ನದಿ ದಂಡೆಯ ಜಂಬುನೀರಲ ಹಣ್ಣು
ಕೃತಯುಗದ ಕೊನೆಗೀಂವಾ ಉಂಡಾನ.

ಬಂದಾರೆ ಬರ್‍ರೆವ್ವ, ಕಂದನ್ನ ತರ್‍ರೆವ್ವ.
ಅಂಜೀಕಿ ಗಿಂಜೀಕಿ ಕೊಂದಾನ.
ರೋಮ ರೋಮಗಳಲ್ಲಿ ಭೀಮರಕ್ಷೆಯ ಬಲ
ಕೊರಳಾಗ ಕಟ್ಟಿರಿ ಒಂದಾನ.

‘ ಕುಣಿಯಲಿ ಮಗನೆ ನೀ ’ ಅನ್ನೊದೊಂದೇ ತಡ
ತನ್ನಽಽನ ತಾನಽನ ತಂದಾಽನ
ಮುದ್ದು ಕೂಸಿನ ಹಾಗೆ ಮುಸುಮುಸು ಮಾಡುತ್ತ
ಕುಣಿದಾನ ಕುಣಿತಽವ ಛಂದಾನ.

ಹೊಟ್ಟೆಗಿಲ್ಲದವರ ಹೊಟ್ಟೆಗೆ ಹಾಕಲು,
ನಡೆದಾನ ಪಡೆದಾನ ಬಂಧಾಽನ.
‘ ಕುಣಿಸುವವರ ಹೊಟ್ಟೆ ತಣ್ಣಗಾಗಲಿ ’ ಎಂದು
ಮುಗಿಲಿಗೆ ಕೈಮುಗಿದು ನಿಂದಾನ.

ಮನಬಲ್ಲ ಮಾನವ ಕುಣಿದಾನ ಕುಣಿಸ್ಯಾನ
ಪ್ರಾಣದ ಈ ಪ್ರಾಣಿಹಿಂದಾಽನ
ಕರಡಿಯ ಹೆಸರೀಲೆ ಚರಿತಾರ್ಥ ನಡಿಸ್ಯಾನ
ಪರಮಾರ್ಥ ಎಂಬಂತೆ ಬಂದಾನ.

ಈ ಮನುಷಾ ಎಂದಿಂದೊ ಕವಲೆತ್ತು ಕೋಡಗ
ತನಗಾಗಿ ಕುಣಿಸುತ್ತ ನಡದಾನ
ಕರಡೀ ಕುಣಿತಕ್ಕಿಂತ ನರರ ಬುದ್ಧಿಯ ಕುಣಿತ
ಮಿಗಿಲಹುದು ಕವಿ ಕಂಡು ನುಡಿದಾನ.

———————

# ಚೆನ್ನಕೇಶವನ ಸಾಕ್ಷಿಯಲ್ಲಿ

ಒಂದೆ ಸತ್ವಕ್ಕೆ ಹಲವು ಹೆಸರು ಬಲ್ಲವರ ಬಾಯಿಯಿಂದ
ಒಬ್ಬ ದೇವ ಹಲವಾರು ನಾಮ ಎಂದೊಬ್ಬ ಶರಣನೆಂದ.
ಒಂದೆ ನೂಲಿನಲಿ ಹಲವು ಹೂವು ಕೋದಂತೆ ಸೃಷ್ಟಿಮಾಲೆ.
ಕಲ್ಲು ಬಲ್ಲದೀ ಮಾತು ! ನಾವು ಮರೆತಿಹುದು ಯಾವ ಲೀಲೆ ?

ಆ ಚೆನ್ನಕೇಶವನ ಸಾಕ್ಷಿಯಲ್ಲಿ ಚೆನ್ನೆಯರು ಕುಣಿಯುತಿಹರು
ದಣಿವಿಲ್ಲ ಮೈಗೆ ತಂತಾನೆ ಒಳಗೆ ತಣಿತಣಿಸಿ ತಣಿಯುತಿಹರು.
ಇದು ಯಾವ ಶಿಲ್ಪಿ ಕಲ್ಪಿಸಿದನೇನೊ ಅಲ್ಪರಿಗೆ ಸಾಧ್ಯವಲ್ಲ.
ಈ ಭೂಮಿತುಂಬ ಭೂಮತ್ವ ಬಿಂಬಿಸಿದ ಸಾರ್ವಭೌಮ ಬಲ್ಲ.

ಏನು ಗೋಪುರದ ಗೌರವೋನ್ನತಿಯಲೆತ್ತಿ ನಿಂತ ನಿಲವು !
ಒಂದೆ ತೆಕ್ಕೆ ಬ್ರಹ್ಮಾಂಡ ಹಿಡಿಸಲೆಂದೆಂದು ತೆರೆದ ಹರವು.
ನಡುವೆ ಗುಡಿಯು ನೆಲೆಗೊಂಡು ಇಹುದು ಸೌಂದರ್ಯಕೇಂದ್ರದಂತೆ
ಸುರರ ನಡುವೆ, ನಕ್ಷತ್ರಗಳಲಿ ಮೆರೆವಿಂದ್ರಚಂದ್ರರಂತೆ.

ಇಲ್ಲಿ ಇಡಿಕಿರಿದು ತುಂಬಿಕೊಂಡ ಸೌಂದರ್ಯ ನೋಡಲೆಂದು !
ದೇವಲೋಕಾದಾ ಚೆಲುವೆ ನೆಲಿಸಿತೋ ಇದನು ನೋಡಬಂದು,
ಕಂಡ ಕಣಸೇನು ? ಎಷ್ಟು ಎಣಸೇನು ? ಇಲ್ಲಿ ಲೆಕ್ಕವಿಲ್ಲ.
ಸೃಷ್ಟಿಯನ್ನೆ ಕರುವಿಟ್ಟ ಬೆಳಕು ಬೆಡಗಾಗಿ ಬಿಟ್ಟಿತಲ್ಲ.

ಮೈಮುರಿದು ಬಿರಿದ ದಾಳಿಂಬದಂತೆ ಜೀವನದ ಪ್ರಭೆಯು ಸುಗ್ಗಿ
ಹಣಿಕುವದು ಇಲ್ಲಿ ಬಿರುಬಿರುಕಿನಲ್ಲಿ ಕಣ್ಸೆಳೆಯುವಂಥ ಸುಗ್ಗಿ.
ಸೌಂದರ್ಯಪೂರ ಪ್ರಳಯಕ್ಕೆ ದೂರ ಬರ್ಬರನು ಕೈಯ ಚಲ್ಲಿ
ಮಣ್ಣಾಗಿ ಹೋದ; ಸಂಹಾರ ಕಾಲ ಕಲ್ಲಾಗಿ ನಿಂತಿತಿಲ್ಲಿ.

ರಾಜಮನದಲಿ ವಿರಾಜಮಾನ ಸಂಕಲ್ಪಸಿದ್ಧಿಯೊಂದು
ಶಿಲ್ಪಪುಣ್ಯವೇ ಪುಂಜವಾಗಿ ಕೈಬಿಟ್ಟು ರೂಪುಗೊಂಡು
ಪಾಪ ತೊಳೆಯಲೆನೆ ಹರಿವ ಗಂಗೆಯೊಲು ಹಿಂದೆ ಎಂದೊ ಬಂದು
ಜನರ ಕಣ್ಣ ಕಶ್ಮಲವ ಕಳೆಯೆ ಕೇಶವನು ನಿಂತನಿಂದು.

ನೀ ತಾಯಿಯೆನಲೊ ನೀ ಮಾಯಿಯೆನಲೊ ಮೋಹಿನಿಯ
ಮೋಹನಾಂಗ ?
ಸುಡುವವರ ಸುಟ್ಟೆ, ಕೆಡುವವರ ಬಿಟ್ಟೆ ಅವರವರಿಗವರ ಸಂಗ.
ತೆರೆದ ಹೊತ್ತಿಗೆಯ ಮರೆಗೆ ಏನು ಠೇಂಕರಿಸುತಿಹುದು ನಿತ್ಯ ?
ಭಗ್ನವಾದ ಚೆಲುವಿನಲಿ ನಿಂತಿಹುದು ನಗ್ನವಾದ ಸತ್ಯ!

ಕಪ್ಪು ನೆಲದಲ್ಲಿ ಹತ್ತಿಹೂವರಳಿ ನಕ್ಕು ನಲಿಯುವಂತೆ
ಚಿತ್ತಭೂಮಿಯಲಿ ಎಂದೊ ಬಿತ್ತಿದಾ ಬೀಜ ಮೂಡಿ ಬಂತೆ ?
ಮನದ ಸುಮನಗಳು ಸೂಸುತಿರಲು ಸುಮನಸರ ಸಂತೆಯಂತೆ
ವೃಷ್ಟಿಯಲ್ಲಿ ಈ ಶಿಲ್ಪಸೃಷ್ಟಿಯಲಿ ಚಿತ್ರದಂತೆ ನಿಂತೆ.

ಕುದುರೆಸಾಲು, ಅಗೊ ಆನೆಸಾಲು, ಕಾಲಾಳು ಸಾಲುಸಾಲು
ಜೀವಲೋಕದಾ ದೇವಲೋಕದಾ ಮೂರ್ತಿ ಕೆಳಗು ಮೇಲು.
ಯಾವ ರಿಣವ ತೀರಿಸಿದರಿಲ್ಲಿ ? ಅದು ಯಾವ ಸಾಲವೆಂದು ?
ಮುಡಿಪನಿಟ್ಟರೋ ಎಲ್ಲ ಕೊಟ್ಟರೂ ಮತ್ತೆ ಸಾಲದೆಂದು.

ಮೂರ್ತಿಸಾಗರದ ತೆರೆಗಳಿಲ್ಲಿ ಕಲ್ಲೋಲ ಮಾಲೆಯಾಗಿ
ನೆಕ್ಕ ಬರುತಿಹುದು ನಯನತೇಜವೇ ರೂಪಜ್ವಾಲೆಯಾಗಿ
ಇಂದ್ರಮೋಹಿನಿಯೊ ಯಾವಹಲ್ಯೆಯೋ ಕಲ್ಲ ಬಾಲೆಯಾಗಿ
ಬಿದ್ದಳಿಲ್ಲಿ ಕನ್ನಡರ ಕೈಗೆ ನವಶಿಲ್ಪಶಾಲೆಯಾಗಿ.

ಹಗಲಿರುಳು ಬಿಡದೆ ಕಣ್ಸೆರೆಯ ಹಿಡಿದ ಅದು ಯಾವ ಚೆಲುವೆಯನ್ನೋ
ಈ ಕಲ್ಲಿನಲ್ಲಿ ಕಟೆದಿಲ್ಲಿ ಇಟ್ಟನೋ ಯಾವ ರತಿಯ ಸ್ಮರನೋ!
ಇದು ಶಿಲ್ಪವಲ್ಲ, ಮಟಮಾಯ ನೋಡಿ, ಮಯಕಲ್ಪ ಸೃಷ್ಟಿಸಿಹುದು.
ಮೈಮುಟ್ಟದೇಸೆ ಮೈದುಂಬುತಿಹುದು ಮಾಯೆಯು ಅಗಾಧವಹುದು.

ಯಾವ ಚೆನ್ನೆಯರು ಎಂತು ಕುಣಿದರೂ ಹಿಡಿಸಬಹುದೆ ಮರುಳು?
ಚೆನ್ನಕೇಶವನ ತುಟಿಯ ಎಳನಗೆಯು ನಮ್ಮ ಕಾಯುತಿರಲು.
ಮೂಲೋಕಕಾದ ಮಾಯಾವಿಯಾದ ಮಾತೆಯ ಅಗಾಧಹೃದಯ
ಮುದ್ದನಿಟ್ಟು ಅಪ್ಪುಗೆಯ ಕೊಟ್ಟು ಬಲಪಡೆಸುತಿಹುದು ಎದೆಯ.

ಇಗೊ ಇಲ್ಲಿ ಯಾವುದೋ ಪೂರ್ವಸೃಷ್ಟಿ ಪ್ರಳಯಕ್ಕೆ ಈಡು ಆಗಿ
ವೇದ ತಮದಿ ಮುಳುಗಿತ್ತು, ಮನುಜಮನ ತಮದ ಬೀಡು ಆಗಿ
ಓಹೊ ದೇವರಿವರಹುದು ಇತ್ತಲೋ ಇಹುದು ಅಸುರವರ್ಗ.
ಗುಡ್ಡದಿಂದ ಕಡಲೊಡಲ ಕಡೆವುದೀ ಯಾವಭೂತಸರ್ಗ.

ಕಡಲಿನಲ್ಲಿ ನೆಲದೊಡಲ ನೋಡಿ ಶ್ರೀಮೀನದೇವ ಕಾದ.
ಒಂದು ಕೈಲಿ ಮಾನವನ ಕುಲವ ಇನ್ನೊಂದು ಕೈಲಿ ವೇದ.
ರತ್ನ ದೊರಕಿಸಲು ಯತ್ನ ನಡೆಸಿರಲು ರಾಜಕೀಯ ವಾದ.
ಜೀವಜೀವನದ ಹೊಟ್ಟೆಕಿಚ್ಚು ಕಾರಿತ್ತು ವಿಷಪ್ರಸಾದ.

ಬುದ್ಧರಿರಲಿ ನಿರ್ಬುದ್ಧರಿರಲಿ, ಅನ್ಯಾಯಿ ನ್ಯಾಯಿ ಇರಲಿ,
ಬ್ರಹ್ಮ ಇರಲಿ ಬ್ರಹ್ಮೇತ್ಯಿ ಇರಲಿ, ಆ ಭೋಗಿ ಯೋಗಿ ಬರಲಿ,
ಈ ಮಾತು ಸತ್ಯ ಈ ಮಾತು ನಿತ್ಯ. ಇದು ಒಂದೆ ದೇವನಾಟ
ಬೇಲೂರ ಕಲ್ಲು ಕನ್ನಡಿಸಿದಂತೆ ನಡೆದೀತು ಎಂದು ಮಾಟ ?

ಒಂದೆ ಕಲ್ಲಿನಲಿ ಕಟೆದರಣ್ಣ ಈ ಕೋಟಿ ಮೂರ್ತಿಗಳನು
ಕೀರ್ತಿಕಳಶ ಕಟ್ಟಿದರು ಮೂಡಿಸುತ ವಿವಿಧ ಅರ್ಥಗಳನು.
ಅಡಿಯಲ್ಲಿ ಬೆರಳು ಮುಡಿಯಲ್ಲಿ ಕುರುಳು ತೀಡಿಹುದು ಒಂದೆ ಕೈಮೆ;
ದೇವಮಾನವರ ಭಂಗಿ ಬೇರ್ಪಡಿಸಿ ತೋರಿಸಿಹುದೆ ಮೈಮೆ.

ಅಣ್ಣನೊಡನೆ ಹಿಂದೊಮ್ಮೆ ನೋಡಿದೆನು ಇದೇ ಸ್ಥಾನವನ್ನು
‘ ಕಣ್ಣು ತೆರೆಸು ನಗೆ ತೋರು ತಮ್ಮನಿಗೆ’ ಎಂದ ಧ್ಯಾನವನ್ನು
ನೆನೆದೆ, ಕಂಡೆ ವಿಗ್ರಹ ವಿಭೂತಿ ವೈಭವ ವಿಲಾಸದಲ್ಲಿ
ವಾಸ್ತುಶಿಲ್ಪ ವಿಸ್ತಾರಗೊಂಡ ಹೊಸದೊಂದು ನ್ಯಾಸದಲ್ಲಿ.

---

# ಯುದ್ಧ ಬಂತು ಮನೆಯುವರೆಗೆ

ಯುದ್ಧ ಬಂತು ಮನೆಯುವರೆಗೆ
ಬನ್ನಿ ಒಂದಾಗಿರಿ.
ಒಳಜಗಳವ ಕ್ಷಣವೆ ನಿಲಿಸಿ
ನಮ್ಮ ಜನವ ಒಲಿದು ಒಲಿಸಿ
ತಾಯಿನೆಲಕೆ ಸೇವೆ ಸಲಿಸಿ
ನಿಮ್ಮ ಹಗೆಯ ತಾಗಿರಿ.
ನರಮನುಷ್ಯ ಒಂದೆ ಜಾತಿ
ಎಲ್ಲ ಜನಕೆ ಒಂದೆ ನೀತಿ
ಹಾಡಿರಿ ನವಕರ್ಮಗೀತಿ
ಹಾಡಿ ಮುಂದೆ ಸಾಗಿರಿ.
ನೋವ ಕಂಡು ನೋಯಿರಿ
ಕೊಲೆಯಿಂದಲು ಕಾಯಿರಿ
ಅಮೃತರಾಗಿ ಸಾಯಿರಿ.

ಯಾರ ಮಕ್ಕಳೇನು ಒಂದು
ಎಲ್ಲ ಹೆಣ್ಣು ನಮಗೆ ಬಂಧು.
ಇಲ್ಲಿ ಇಲ್ಲ ನಂದು ನಿಂದು
ಬಗೆದು ಇದನು ತೂಗಿರಿ.
ಫಲಿಸಿ ಬಂತು ಪೂರ್ವಕರ್ಮ
ವಿವಿಧ ಮತದ ಒಂದೆ ಮರ್ಮ
ಮೂಲಕಿರುವ ಆತ್ಮಧರ್ಮ
ಬಾಳ ಗೆದ್ದು ಬಾಳಿರಿ.
ನಿಮ್ಮ ನೀವೆ ಆಳಿರಿ.
ಬಂದ ಕಷ್ಟ ತಾಳಿರಿ.
ಜಗಕೆ ಬಂತು ಮಹಾಪ್ರಳಯ
ಹಿಡಿಯಾಯಿತು ಭೂಮಿವಳಯ
ಇಳಿಯಲಿಲ್ಲಿ ಸ್ವರ್ಗನಿಳಯ
ದೇವಜಾತಿಯಾಗಿರಿ.
ಶಕ್ತಿ ಬಹಳು ಇಳೆಗೆ ಇಳಿದು
ಮಹಾದೇವ ದೇಹ ತಳೆದು
ತಮ್ಮ ಅಡಿಗಳಿಂದ ಅಳೆದು
ಆಃ ಅಡಿಗೆ ಬಾಗಿರಿ.
ಎದೆಗಳನ್ನು ತೊಳೆಯಿರಿ
ಮಿಂಚಿನಂತೆ ಹೊಳೆಯಿರಿ
ಒಲವಿನೊಲವ ಬೆಳೆಯಿರಿ.

———

# ಯಮದೇವನ ಒಕ್ಕಲು

ಕೋಣವೇರಿ ಬರುವ ಯಮಾ
ಎಲ್ಲಿ ಇಲ್ಲೊ ಸಂಯಮಾ.
ಕಾಮಕಿಲ್ಲ ಅಂತವು
ಅರ್ಥವಿಹುದಪಾರವು
ಅಂತೆಯೇನೊ
ಅಂದರೂನೊ
ಈ ಎದೆಗಳು ಯಾರವೂ
ಇನ್ನೂನೂ ಆರವು.

ಬೇಕು ಬೇಕು ಎನುತಿವೆ
ಸುಟ್ಟರೂನು ಬೇಯವು
ಅಂತೆಯೇನೊ
ಅಂದರೂನೊ
ಸತ್ತರೂನು ಸಾಯವು
ಸಾವಿನಾಚೆ ಹಾಯವು.

ಭೂತಕಾಲ ದೆವ್ವವು
ಬಲಿ ಬೇಡುವದಿಂದಿಗು
ಅಂತೆಯೇನೊ
ಅಂದರೂನೊ
ಯುದ್ಧ ಇಹುದು ಎಂದಿಗೂ
ಕಾಲ ಸಂಧಿಸಂಧಿಗೂ.

ಎಂದು ಇದಕೆ ಮೋಕ್ಷವು?
ಏನನಾದಿ ಕರ್ಮವೋ!
ಅಂತೆಯೇನೊ
ಅಂದರೂನೊ
ಹೊಳೆಯದಿದರ ಮರ್ಮವೋ!
ಜಗಕೆ ಯಮನೆ ಧರ್ಮವೋ?

ಯಮದೇವರ ಒಕ್ಕಲು
ನಿತ್ಯ ಮರಣಸಿದ್ಧರು
ಅಂತೆಯೇನೊ
ಅಂದರೂನೊ
ಗೆದ್ದು ಇವರು ಬಿದ್ದರು
ಎದ್ದು ಅಪ್ರಬುದ್ಧರು.

ನರದೇಹದ ಪಶುಗಳು
ಇವರ ವೈರ ಮಾಣವು
ಅಂತೆಯೇನೊ
ಅಂದರೂನೊ
ಇವರ ಕಣ್ಣು ಕಾಣವು
ಇವರ ದೃಷ್ಟಿ ಕೋಣವು.

———

# ಬೀದಿ ನಾಯಿ ರಾಧೆ

ಬೀದಿ ನಾಯಿ ರಾಧಿಗೆ
ಹೊಟ್ಟೆ ತುಂಬ ಮೊಲೆಗಳು.
ಹೊಟ್ಟೆ ತುಂಬ ಎದೆಯ ತುಂಬ
ಜೋಲು ಮೊಲೆಯ ಸಾಲ್ಗಳು.

ಬೀದಿ ನಾಯಿ ರಾಧಿಗೆ
ಊರ ತುಂಬ ಗೆಳೆಯರು
ಸರ್ವಸಾಕ್ಷಿ ಇವಳ ಪ್ರಣಯ
ನೋಡುವವರು ಎಳೆಯರು.

ಬೀದಿ ನಾಯಿ ರಾಧಿಗೆ
ಅಸರಂತವು ಮರಿಗಳು
ಹೊಟ್ಟೆಗೆಂಬ ಚಿಂತೆ ಇಲ್ಲ
ಇವಳೆ ಅವರ ಹೊರೆವಳು.

ಬೀದಿ ನಾಯಿ ರಾಧಿಗೆ
ಬೇಕು ಅವಳಿಗೆಲ್ಲರು
ಹರಕ ತಿರುಕ ಹಾದಿಹೋಕ
ಚೋರ ಪೋರ ನಲ್ಲರು.

ಬೀದಿ ನಾಯಿ ರಾಧಿಗೆ
ಇಲ್ಲ ಕೆಲಸ ಸಂಬಳ
ಊರ ತಿಪ್ಪೆ ಮಸಣ ಕುಪ್ಪೆ
ಅದೇ ಅವಳ ಉಂಬಳಿ.

ಬೀದಿ ನಾಯಿ ರಾಧಿಗೆ
ಮಳೆ ಬಿಸಿಲಿಗೆ ಸಾಧನ
ಹುಣಿಸೆ ಮರದ ನೆರಳು ಹೊದರು
ಎವ್ವನ ಆರಾಧನ.

ಬೀದಿ ನಾಯಿ ರಾಧಿಯು
ಮೊನ್ನೆ ಹೇಗೊ ಸತ್ತಳು.
ದುರುಳನೊಬ್ಬ ಏಕೊ ನಕ್ಕ
ಹೊಲಸೂಳೆಯು ಅತ್ತಳು.

---

# ಜೀವನ–ಕಲ್ಯಾಣ

[ ಕೋಲುಹಾಡು ]

ಜೀವನ ಒಂದು ನಾಽಟಕಽ
ಹೂವು ಹಣ್ಣಿನಾ ಕೂಟಕ್ಽ || ಪಲ್ಲ ||

ಮಲ್ಲಿಗಿ, ಮಲ್ಲಿಗಿ, ಅಲ್ಲಿಗಿ, ಇಲ್ಲಿಗಿ
ಎಲ್ಲಾನು ಮಲ್ಲಿಗಿ ನೋಡಣ್ಣಾ ||
ಮಾವು ಮಾವು ನಾವು ನೀವು
ಎತ್ತಾನು ಮಾವು ನೋಡಕ್ಕಾ || ಅನುಪಲ್ಲ ||

ಬೇವಂಬೋದು ಅಧರದ ಮ್ಯಾಲೆ
ನೋವಂಬೋದು ಉದರದ ಒಳಗ
ಜೀವಂಬೋದು ಮಕ್ಕಳ ನೋಟ
ಮಾಯಾದೇವಿ ಮಾಟಕಃ || ಜೀವನ ಒಂದು....

ಹರೆಯೆಂಬೋದು ತೆರೀಹಾಂಗ
ಬಂತ ಅಂತ ಹೊರಟಿತು ಬ್ಯಾಗ ||
ಬಾ ಸಿಂಗಾರದ ಬ್ಯಾಟಕಃ
ಮುಗಿಯ್ಯಃದ ಆಟಕಃ || ಜೀವನ ಒಂದು....

ಮರಣದ ಹತದಿ ತಿಳಿದೂ ತುಳಿದೂ
ಶರಣರ ಹಾದಿ ಹುಡುಕತೇವಿ ||
ಕರುಣದ ಕಣ್ಣು ಕಂಡಿತಕ್ಕಃ
ಗಂಗೀ ಗೌರೀ ನೋಟಕಃ || ಜೀವನ ಒಂದು....

ನಂಜುಂಡೇವ ಅರುವಿಗೆ ಕದ್ದು
ಕೈಲಾಸಂಬೋದು ಮುಗಿಲ ಮುದ್ದು ||
ಜನ್ಮಜನ್ಮಕೂ ಒಂದಃ ಹಣ್ಣು
ಶಿವ ಶಿಂಗಾರದ ತ್ವಾಟಕಃ || ಜೀವನ ಒಂದು....



# ಅ-ಸ್ಮಿ-ತಾ

ಬೇಟೆಗಾರಿಕೆ ಕಣ್ಗೆ ಮಣ್‌ಹೊಯ್ದು ಎಂದಾರೆ
ಹಕ್ಕಿಗಳ ಕೇಳಿರುವೆಯಾ ?
ಬಣ್ಣರೂಪದ ಮಾಲೆ ಬದಿಗಿರಿಸಿ ನರುಗಂಪ
ಹಾಡನ್ನು ಕೇಳಿರುವೆಯಾ ?
ಪಂಚ ಪಕ್ವಾನ್ನವನು ಬಿಕ್ಕೆಯಲಿ ಕಂಡಾಗ
ಅಮೃತಾನ್ನ ಉಂಡಿರುವೆಯಾ ?
ಸಿಂಗಾರ ಭಂಗಾರ ಪಾಂಗಾರೆ ಭಂಗಿಸಿರೆ
ಕಣ್ಮುಚ್ಚಿ ಕಂಡಿರುವೆಯಾ ?
ಋತುಮಾನ ಬೆಸವಾಗಿ ಬಿಗುಮಾನ ಹಿರಿದಾಗೆ
ಶಾಂತತೆಯ ತಳೆದಿರುವೆಯಾ ?
ಹಸಿನಾತ ರಾಕ್ಷಸಿಯ ಭಕ್ಷಣೆಗೆ ಹೊರಗಾಗಿ
ತೃಪ್ತಿಯಲಿ ಕಳೆದಿರುವೆಯಾ ?

ಕಲ್ಲ ಕಂಬನಿ ಸುರಿಸಿ, ಬೆಲ್ಲ ಸಪ್ಪಗೆ ಇರಿಸಿ,
ಮೆಲ್ಲೆದೆಯ ಮುಟ್ಟಿರುವೆಯಾ?
ಏರಿಳಿವುಗಳ ದಾರಿ ಉದಯಾಸ್ತಗಳ ಮೀರಿ
ರವಿಯಾಗಿ ಹುಟ್ಟಿರುವೆಯಾ ?
ಭೀತ ರುದ್ರನ ಇದಿರು ನಿರ್ಭೀತ ಶಿವನಂತೆ
ಎಂದಾರೆ ನಿಂತಿರುವೆಯಾ ?
ಅಲೆದಲೆದು ದಣಿದರೂ ನೆಲೆನಿಂತ ಅಡಿಗಳಲಿ
ಕ್ಷಣವಾರೆ ಕುಂತಿರುವೆಯಾ?
ತಾಯಿ ಕೂಸಿನ ಮುದ್ದು ಮೌನದಲಿ ಮಿಡಿದಾಗ
ಶ್ರುತಿಯನ್ನು ಹಿಡಿದಿರುವೆಯಾ?
ಧ್ಯಾನ ಪಕ್ವತೆ ಪಡೆದು ಮೌನ ಬೀಜವು ಸಿಡಿದು
'ಓಂ' ವೇದ ಪಡೆದಿರುವೆಯಾ?
ಬಾ ತಾಯಿ ಬಾ ಗುರುವೆ ಬಾ ಗೆಳೆಯ ಬಾ ಒಡೆಯ
ಬಾ ನಲ್ಲೆ ನಾನೆ ಬರಲೆ ?
ನಾದ ತಂತಿಯಲೊರಗಿದಂತೆ ಸಹ–ಭವನಾಗಿ
ಬಾಯ್ದೆರೆಯ ನಗೆಯೊಲಿರಲೇ?
ಸ್ಮೃತವೆ ವಿಸ್ಮೃತವಾಯ್ತು ಅಸ್ಪರ್ಶ ಸ್ಪರ್ಶದಲಿ
ಅಸ್ಮೃತೆಯ ಸ್ಫೂರ್ತಿಸಿತ್ತು.
ವಿಸ್ಮೃತದ ಸ್ತಿಮಿತದಲಿ ಮೌನವೇ ಧ್ವನಿಸುತಿರೆ
ಸ್ಮೃತವಾಗಿ ಮೂರ್ತಿಸಿತ್ತು.

———

# ಅಂತೆವ್ರೋಲ್

[ ಉಪಮಾನಿಷ್ಠಾಃ ಕವಯಃ ]

ಅಂತೆವ್ರೋಲ್ ಅಂತೆವ್ರೋಲ್
ನಾನು ನಿನ್ನಂತೆವ್ರೋಲ್
ನೀನು ನನ್ನಂತೆವ್ರೋಲ್
ಅಂತೆಗಂತೆ ಕೂಡಿ ಸಂತೆ
ಕೊಡುಕೊಳಿ ನಡೆದಂತೆವ್ರೋಲ್
ನಾನು ಹೇಳಿ ನೀನು ಕೇಳಿ
ನೀನು ಆಡಿ ನಾನು ನೋಡಿ
ಒಂದು ಇದ್ದಂತೆವ್ರೋಲ್
ಎರಡು ಆದಂತೆವ್ರೋಲ್
ಎದುರುಗೊಂಡು ಇದಿರುಗೊಂಡು
ನಮ್ಮ ನಾವೆ ತಿಳಿದುಕೊಂಡು

ಭಾವವೆಂಬ ಹೂವಿನಲ್ಲಿ
ಹುರುಳುಗೊಂಡ ತಿರುಳಿನಲ್ಲಿ
ನನ್ನ ರುಚಿಯ ನೀನು ಕಂಡು
ನಿನ್ನ ಸವಿಯ ನಾನು ಉಂಡು
ಎರಡರಲ್ಲೆ ಎಲ್ಲವಾಗಿ
ಎರಡೆಂಬುದೆ ಅಲ್ಲವಾಗಿ
ದ್ವಂದ್ವದಲ್ಲಿ ದಂಪತಿ
ವಿಶ್ವವಾದ ಶಿವಸತಿ
ಹಿಗ್ಗಿನಲ್ಲಿ ದೇವವಸತಿ
ರೂಪ ರೂಪ ಸರಸತಿ
ಕೆಳಗೆ ಮೇಲಿನಂತೆವೋಲ್
ಹೊರಗೆ ಒಳಗಿನಂತೆವೋಲ್
ಅಂತೆವೋಲ್ ಅಂತೆವೋಲ್
ತಿಳಿದಮಾತೆ ಹೊಳೆಸಿದಂತೆ
ಎದೆಯ ಬೀಜ ಬೆಳೆಸಿದಂತೆ
ಭಾವನಾದದಂತೆವೋಲ್
ದೃಷ್ಟಿಯೆ ಹೊಸ ಸೃಷ್ಟಿಯಂತೆ
ಮಾತೇ ಮಧು ವೃಷ್ಟಿಯಂತೆ
ತಾನೆ ಗಾನದಂತೆವೋಲ್
ದನಿಯೇ ನದಿಯಾದ ಹಾಗೆ
ನಾದವೆ ಜಗದಗಲವಾಗೆ.

---

# ಗಾಳಿಗಳೇ

ಗಾಳಿಗಳೆ, ಮರುಳರಿರಾ, ಶಿವಗಣಂಗಳಿರಾ
ಬನ್ನಿ ಬೀಸಿರಿ ಮರುಳು ಕಾಡಿನಿಂದ
ನಿಮ್ಮ ಗೂಡಿನಿಂದ
ಮೂಡಲಿದೆ ಹೊಸ ಚಿಗುರು
ಮೂಡಲಿದೆ ಹೊಸ ಪೊಗರು
ಮೂಡಲಿದೆ ಹೊತ್ತು
ಕುಡಿಯೊಡೆದು ಕಣಕಣವು
ಕುಣಿಯೆ ರುದ್ರರ ಗಣವು
ಕುಣಿಯಲೆದ್ದಿತು ಹೆಣವು
ಪರ್ವವೀಕ್ಷಣವು.
ಸುಡುಗಾಡುಗಳ ಬೂದಿ
ಬಾನ ಬಟ್ಟೆಯೊಳೂದಿ
ತೆರೆಯಲಿದೆ ಹೊಸ ಹಾದಿ
ತಮ್ಮಗಳಿಗೆ
ಕೊಳ್ಳಿದೆವ್ವಗಳದುರೆ
ಮರ ಹೊದರುಗಳು ಒದರೆ
ಮಿಸುಕಲಾರದೆ ಬೆದರೆ
ಬಿದ್ದಿಹವು ಹಮ್ಮು.

ಬರಲಿ ಝುಂಝಾವಾತ
ರುದ್ರಗಣಸಂಜಾತ
ಅಲ್ಲಾಡಲೆಲ್ಲೆಲ್ಲು ಭೂತಜಾತ
ಓ, ಹೋ, ಹೋ,
ಕಡಲು ಕದಲಾಡಿತ್ತು
ನೆಲವು ನಡುಗಾಡಿತ್ತು
ಬೆಳಕು ಸಿಡಿಲಾಡಿತ್ತು
ಸುತ್ತು ಮುತ್ತು.

ಊರೂರೆ ರಣಕಣವು
ತಾಂಡವವು ಗೊಂದಣವು
ರಕ್ತದೋಕುಳಿಯಾಡೆ ಜೀವಗಣವು
ಚಿಮ್ಮಿತ್ತು ಕೈಲಾಸ
ಹೊಮ್ಮಿ ರುದ್ರನ ಹಾಸ
ಒಮ್ಮೆ ನಿಮ್ಮ ವಿಳಾಸ
ನೋಡಿ ನೋಡಿ.

ಮರುಳರಿರಾ, ಮರುತರಿರಾ
ಒಂದುಗೂಡಿ
ಏನು ಆಡುವಿರಾವ ಆಟ ಹೂಡಿ ?
ಬನ್ನಿ, ಶಿವನ ಕೂಡಿ.

---

# ಜೀವನನಾಟ್ಯ

ಇದ್ದುದಿಲ್ಲದನು ಒಂದೆ ಶೂನ್ಯದಲಿ ಸುತ್ತಿಕೊಂಡ ನಿದ್ದೆ.
ಎದ್ದಮೇಲೆ ಎರಡೊಂದ ಮಾಡಿ ಬೆಳೆಸುವದು ಸೃಷ್ಟಿವಿದ್ಯೆ.
ಗಂಡುಸೆಂತೊ ಸಂತಯಿಸಿಕೊಳಬಹುದು ಪರಬ್ರಹ್ಮದಂತೆ.
ಮಕ್ಕಳಿಲ್ಲದೀ ಬಾಳನೆಂತು ಸಹಿಸುವಳು ಪ್ರಕೃತಿಕಾಂತೆ ?

ಹೆರಲು ಹೊರಲು ಹೊಟ್ಟೆಯನೆ ತೆರೆದು ತಂನೀರನಲ್ಲಿ ಕಟ್ಟೆ
ಹುಟ್ಟೆಯಲ್ಲಿ ಹನಿಜೇನನೊಟ್ಟಿದೊಲು ಒಲುಮೆಯನ್ನೆ ಒಟ್ಟೆ
ಮುಟ್ಟೆ ಕಟ್ಟೆ ತನಿ ಮೂರ್ತಿಗೊಳಿಸಿ ಮುತ್ತಿಡಲು ಹೊರಕೆ ತಂದು
ಬಯಲನೊಂದು ಗುಡಿಗೊಳಿಸುತಿಹಳು ಒಳುಬಾಳ ಹರಕೆ ಎಂದು.

ಮಣ್ಣಗೊಂಬೆ ಒಳಗಣ್ಣಗೊಂಬೆಯಲಿ ನಾಟಿ ಮುದ್ರಿಸಿರಲು
ತನ್ನ ನೆನೆವನೇ ತಾನೆ ನೆನೆಸಿ ಒಳವೊಳಗೆ ನಿದ್ರಿಸಿರಲು
ಹೃದಯ ಮುದ್ರೆಯನು ಬಿಚ್ಚಿ ನಾಡಿಯಲಿ ಬೀಜ ಬಿಂದುಗೂಡಿ
ನಾಟ್ಯವಾಡಲನುವಾಗುತಿಹವು ಅವು ಏನೋ ಆಟ ನೋಡಿ.



# ನಾನು–ನೀನು

ನಾನು ಸರಸಿ ನೀನು ಅರಸ
ಆಳಿ ನೋಡ ಬಾ.
ನಾನು ನೀರೆ ನೀನು ನಲ್ಲ
ಬಾಳಿ ನೋಡ ಬಾ.

ನಾನು ಹಣ್ಣು ನೀನು ಗಿಳಿಯು
ಕುದುಕಿ ನೋಡ ಬಾ.
ನಾನು ಗೆಳತಿ ನೀನು ಗೆಳೆಯ
ಬದುಕ ಮಾಡ ಬಾ.

ನಾನು ನೋಟ ನೀನು ಕಣ್ಣು
ಬೆಳಕು ನೀಡ ಬಾ.
ನಾನು ಮಾಯೆ ನೀನು ಈಶ
ಮೋಡಿ ಆಡ ಬಾ.

ನಾನು ಹೊರಗು ನೀನು ಒಳಗು
ಪಟ್ಟುಪಡೆಯೆ ಬಾ.
ನಾನು ನೆಲವು ನೀನು ನೀರು
ನಟ್ಟು ನಡೆಯೆ ಬಾ.

ಗಾಳಿ ನಾನು ಬಾನು ನೀನು
ಮೂಡಿ ನೋಡ ಬಾ.
ಗೀತ ನಾನು ಪ್ರೀತ ನೀನು
ಕಟ್ಟಿ ಹಾಡ ಬಾ.

———

# ಹಿಗ್ಗು ತರಲಿ ಬಿಡುಗಡೆ

ಹಿಗ್ಗು ತರಲಿ ಬಿಡುಗಡೆ
ಹಿಗ್ಗುತಿರಲಿ ಬಿಡುಗಡೆ.
ಅಲ್ಲಿ ಇಲ್ಲಿ ಎಲ್ಲೋ ಏಕೆ?
ಎಲ್ಲ ಇರಲಿ ಒಳಗಡೆ;
ಮೇರೆ ಬೇರೆ ಕೊರೆಯಬೇಡ
ಬೆರೆಯಬೇಕು ಬಿಡುಗಡೆ.
ಹಿಗ್ಗದಿದ್ದರೊಳಗಡೆ.
ಅಯ್ಯೋ ಕಷ್ಟ ಬಿಡುಗಡೆ!
ಕಟ್ಟಬೇಡ; ಅಟ್ಟಬೇಡ
ಬರಲಿ ಬಿಡುಃ ಬಿಡುಗಡೆ.

ಒಬ್ಬನೊಬ್ಬ ತಿಳಿಯಬೇಕು
ಅದುವೆ ಹಬ್ಬ ಭಾವಕೆ.
ಕೊಲ್ಲುವ ಕೋಲಾಹಲದಲಿ
ಸಾವೆ ಬಹದು ಜೀವಕೆ.
ಅನ್ಯರನ್ನು ಕಟ್ಟಿಹಾಕಿ
ಕಟ್ಟಿಕೊಂಡೆ ನಿನ್ನನು.
ಬಿಡಿರಿ ಎಂದು ಕಿರಿಚುತಿರುವೆ
ನೀನೆ ಬಿಡಲು, ಧನ್ಯನು.
ಬಿಚ್ಚಲಾರೆ ಹಿಗ್ಗಲಾರೆ
ಎದೆಯೊಳಿಹುದು ಡವಡವ.
ಕೊಡುಗೆಯಲ್ಲಿ ಕೊಳುವೆಯಿದೆ.
ರಚಿಸಬೇಡ ರೌರವ.
‘ ಬಿಡೋ, ಬಿಡು, ಬಿಡು ಬಿಡೂ, ’—
ಎದೆಯ ಸೊಲ್ಲು ನಿಶಿದಿನ.
ಕಟ್ಟೆಂಬೆ ಕಡೀ ಎಂಬೆ
ನೀನು ಮಾತ್ರ ಅನುದಿನ.
ಎಲ್ಲರಿಗೂ ಅದೆ ಕಾದಿದೆ
ಬೇಕಾಗಿದೆ ಬಿಡುಗಡೆ.
ಅದು ಇಲ್ಲದೆ ಹಿಗ್ಗು ಇಲ್ಲ
ಬೇರೆ ಇಲ್ಲ ನಿಲುಕಡೆ.

———

# ನಲ್ ತಾಯಿ

ತಿಳುವಳಿಕೆಯಂಥ ತಿಳಿಗೇಡಿ ಎಲ್ಲಿಯು ಇಲ್ಲ।
ಕಳಕೊಂಡ ಹೊರತು ಬೆಲೆಯರಿಯದದು. ಫಲವಿಲ್ಲ ॥

ಇದ್ದಾಗ ತಿಳಿಯಲಿಲ್ಲಿನ್ನ ತಿಳಿವು।
ಮುದ್ದಾಡಿಕೊಳುವಷ್ಟರಲಿ ಬಂದಿತಳಿವು ॥

ಯಾವ ಜನ್ಮದಲಿನ್ನು ರಿಣವ ತೀರಿಸಲಿ।
ಯಾವ ಸೇವೆಯ ಮಾಡಿ ಹೆಸರ ಬೀರಿಸಲಿ ॥

ಹೊತ್ತು ಹೊತ್ತಿಗೆ ನಿನ್ನ ಯೋಗವನು ಕ್ಷೇಮವನು।
ಗೊತ್ತುಪಡಿಸೌ. ನಿನ್ನ ನೆನವಿನಲಿ ಯಾಮುವನು ॥

ಕಳೆಯುವದೆ ಸೇಮವಾಗಿದೆ ಜೀವಕಿನ್ನು।
ಬಳಿಕೆ ಉಳಿಯಲಿ ತಾಯೆ ಇಸ್ನು ಮುಸ್ನು ॥

ವೃಣ ನೋಡಿ ಬಂದದರ ಮೇಲ್ಕೂತ ಸೊಣಪಂತೆ।
ರಿಣಗೇಡಿ ಜೀವವಿನ್ನೇಕೆ ಮಮತೆಯ ಚಿಂತೆ ? ॥

ಕುಕ್ಕುವಿಯೆ ? ನೆಕ್ಕುವಿಯೆ ? ಮಾಯದಾ ಗಾಯ।
ಬಿಕ್ಕಿಲ್ಲ ಬಿಕ್ಕಿದರು ನೂರಿಂಥ ಕಾಯ ॥
ಧರಿಸಿದರು ನಿನ್ನಂಥ ತಾಯಿ ಸಿಕ್ಕಾಳೇ ? ।
ಹರಸೆನ್ನ 'ಬಾ ಮಗುವೆ' ಎಂದು ನಕ್ಕಾಳೇ ? ॥
ಮುಂಗೆಟ್ಟು ಖೋಡಿ ! ಮರಣವ ನೋಡಲಿಲ್ಲ।
ಕಂಗೆಟ್ಟು ಆಶಿಸವ ಬೇಡಲಿಲ್ಲ ॥

ಅಯ್ಯೊ ! ಬಾಗಿ ಆಶೀರ್ವಾದ ಬೇಡಲಿಲ್ಲ।
ಅಯ್ಯೊ ! ಕಡೆಯ ಆಶೀರ್ವಾದ ಬೇಡಲಿಲ್ಲ ॥

---

# ಆಡಿ ಫಲವೇನು ?

ಆಡಿ ಫಲವೇನು ಆಗದ ಮಾತ? ಬಿಂಬವೇ,
ತೋಡಿ ಫಲವೇನು ತೀರದ ದುಃಖವ ? || ಪಲ್ಲ ||

ನೋಡಿ ಫಲವೇನು ನಿಲುಕದ ನೆಲೆಯ ? ಬಿಂಬವೇ,
ಮಾಡಿ ಫಲವೇನು ಮುಗಿಯದ ಯತ್ನವಾ ? ||
ಕಾಡಿ ಫಲವೇನು ಕರಗದ ಕರುಳ ? ಬಿಂಬವೇ,
ಹಾಡಿ ಫಲವೇನು ಹಿಗ್ಗದ ಬಗೆಗಳ ? ||
ಬಾಡಿ ಫಲವೇನು ಬಯಲಿನ ಮುಂದೆ ? ಬಿಂಬವೇ,
ಬೇಡಿ ಫಲವೇನು ಬಾರದ ವಸ್ತುವ ? ||
ಮೂಡಿ ಫಲವೇನು ಮುಸುಕಿನ ಹಿಂದೆ ? ಬಿಂಬವೇ,
ಹೂಡಿ ಫಲವೇನು ಹೊಳೆಯದ ಆಟವ ? ||
'ಫಲವೇಂ ಫಲವೇಂ' ಎಂದು ಕೇಳುವೀ ಖೋಡಿ ಜೀವಕೆ |
'ಒಲವೇ ಹಲವೇಂ' ಎಂದು ಹೇಳಬಾರದೆ ದೇವನೆ ||

————

# ಕನ್ನಡದಪ್ಪನ ಕೋಲು

ಕೋಲುಕೋಲಿನ ಆಟ, ಕೂಡಿ ಕೊಳಲಿನ ಆಟ,
ರಾಸಲೀಲೆಯ ಕೋಲ |
ಬಾಲಬಾಲೆಯರಾಟ, ಸೂತ್ರ ತಾಯಿಯ ನೋಟ,
ಹಾಸಶೀಲೆಯ ಕೋಲ ||

ನವ್ಯನಂದನ ಮಾಟ, ದಿವ್ಯ ಹೃದಯದ ತೋಟ,
ಕರುಳವಳ್ಳಿಯ ಕೋಲ |
ಕಾವ್ಯರಸದ ಕೂಟ, ನೇಹದುಸುರಿನ ತೀಟ,
ತಿರುಳು ಮಲ್ಲಿಗೆಯ ಕೋಲ||

ಕೂಟರಾಜನ ಗಾಡಿ, ನಟರಾಜನ ನೋಡಿ,
ಚಿದಂಬರದಿ ಕೋಲ |
ಬೇಟದಾಟವನಾಡಿ, ಬೆಳ್ಳಿದಿಂಗಳು ಮೂಡಿ
ಹೃದಂಬರದಿ ಕೋಲ ||

ತಂತ್ರಯುಕ್ತಿಯ ಕೋಲ, ರಾಗದುಕ್ತಿಯ ಕೋಲ,
ಪ್ರೇಮಭಕ್ತಿಯ ಕೋಲ |
ಯಂತ್ರಶಕ್ತಿಯ ಕೋಲ, ತ್ಯಾಗಭುಕ್ತಿಯ ಕೋಲ,
ಲೀಲಾಮುಕ್ತಿಯ ಕೋಲ ||

———

# ಚೆನ್ನಲಿಂಗವೇ

ಮಾತಾಡೋ ಮಾತಾಡೊ ಲಿಂಗವೇ | ನೀ |
ಮಾತಾಡಲೊಲ್ಲೇಕೊ ಲಿಂಗವೇ ||
ಮಾತಿನ ತಾಯಾದ ಮೌನದ ಬಸುರಲಿ |
ಹೂತೆಯೊ ಹೇ ಚೆನ್ನಲಿಂಗವೇ || ಪಲ್ಲ ||

ಪರೆಯ ಮರೆಯಲ್ಲಿಹ ಲಿಂಗವೇ | ನೀ |
ಪರೆಯುಚ್ಚಿ ಬಹೆಯೆಂದು ಲಿಂಗವೇ ||
ಹರೆಯ ಪರೆಯನ್ನೂದಿ ಹಿರಿಯ ಹಿಗ್ಗನ್ನೆಂದು |
ಹರಹುವಿ ಹೇ ಚೆನ್ನಲಿಂಗವೇ || ೧ ||

ಕೇಳಿ ಬಲ್ಲೆನು ಕೇಳು ಲಿಂಗವೇ | ನೀ |
ಹೇಳುವಿಯಾ ಹೇಳು ಲಿಂಗವೇ ||
ಆಳು ತಿಳಿಯದ ಯಾವ ಬಾಳಿನಲ್ಲಾ ದೇವಿ |
ಆಳುವಳು ಹೇ ಚೆನ್ನಲಿಂಗವೇ || ೨ ||

ಆಡಿದ ನುಡಿಗಿಂತ ಲಿಂಗವೇ | ನೀ |
ಹಾಡಿದ ನುಡಿ ಲೇಸು ಲಿಂಗವೇ ||
ನೋಡಿದ ಕೂಡಿದ ಎದೆಯಲ್ಲಿ ಆ ರೂಪು |
ಮೂಡೀತು ಹೇ ಚೆನ್ನಲಿಂಗವೇ || ೩ ||

---

## ರಾಮರಾಮಾ !

ಕರುವಿನ ಕರೆ ಕೇಳಿ ತೊರೆಗರೆಯದ ಹಸು |
ಇರಬಹುದೇನೆಲ್ಲಿ ರಾಮರಾಮಾ ||
ಮುರುಗುವ ಮರಿಗಾಗಿ ಎರಕವನೆರೆಯದ
ಮರುಕವು ಮರುಕವೆ ರಾಮರಾಮಾ ||

ಮರುಗು ಮರುಕವು ಕೂಡಿ ಎರಡಲ್ಲ ಒಂದಹುದು |
ಎರಕ ಹೊಯ್ದಂತದು ರಾಮರಾಮಾ ||
ಮರುದನಿ ಸರದಂತೆ ನೆರೆವಾಗಿ ಇರುವವು |
ಎರವಾಗಬಹುದೇನು ರಾಮರಾಮಾ ||

ಮಗುವು ನೀರಡಿಸಿರೆ ಶರದಿಂದ ಕರೆಯಲು |
ಲಗುಬಗೆಯಿಂದಲಿ ರಾಮರಾಮಾ ||
ಮುಗಿಲಿಗೆ ಪಾರ್ವಂತೆ ಪಾತಾಳಗಂಗೆಯು |
ನೆಗೆದಳೂಟೆಯಾಗಿ ರಾಮರಾಮಾ ||

ಅಂಬುವನೆಸೆದರು ಅಂಬುವನೆ ಕರೆಯುವ |
ಅಂಬೆಯೆ ಅಂಬೆಯೆ ರಾಮರಾಮಾ ||
ಬೆಂಬಲವಿಲ್ಲದ ' ಹಂಬಾ ' ಎಂಬಾ ಕರೆಯ |
ಹಂಬಲದರ್ಥವೇನ್ ರಾಮರಾಮಾ ||

ತುಂಬಿಯಂತಂಬೆಯು ಮರುಗಿನ ಹೂನೀರ |
ಚುಂಬಿಸಿದೊಡನಲ್ಲಿ ರಾಮರಾಮಾ ||
ತುಂಬೆಲ್ಲ ಮರುಕದ ಜೇನು ತುಂಬುವದೇನ– |
ಸಂಭವವೇ ಪೇಳು ರಾಮರಾಮಾ ||

ಮಡಿ ನೀಡು ಎಂದೆಂದೂ ಅಡಿಗಡಿಗೆ ನುಡಿಯುವ |
ಕಡುಮಮತೆಯ ತಮ್ಮ ರಾಮರಾಮಾ ||
ಮಡುವಾಗು ನಲ್ಲಮ್ಮ ಒಕ್ಕಲಿಹ ಮಡಿವಳಿತಿ |
ಮಡಿಗೊಳಿಸೆನ್ನೆಂದೆ ರಾಮರಾಮಾ ||

ತೀರ್ಥರೂಪಳು ನೀನು ತೀರ್ಥವಾಗುವದೇನು |
ಸಾರ್ಥಕವಲ್ಲವೆ ರಾಮರಾಮಾ ||
ಸಾರ್ಥಪರಮಾರ್ಥದ ವೀಥಿಯ ತೋರೆಂದು |
ಪ್ರಾರ್ಥಿಸಿದೆನವಳ ರಾಮರಾಮಾ ||

ಕಲಿ ತೊಳೆದು ಬೆಳಗುವ ಕೈಯು ಕೆಸರೆಂಬಂತೆ |
ಮಲಿನವಾಗಲು ಬಹುದೆ ರಾಮರಾಮಾ ||
ಮಲಿತದ್ದು ಮಾಸಿದ್ದು ಕಳೆಯುವ ಮಡಿವಳ |
ಹೊಲೆಯಾಗಿ ಸಾಗೀತೇ ರಾಮರಾಮಾ ||

ಮುಟ್ಟು ಮೈಲಿಗೆಯುಳ ತಟ್ಟು ಮೈಲಿಗೆಯಾದ |
ಕೆಟ್ಟು ಮೈಲಿಗೆಯಿರುವ ರಾಮರಾಮಾ ||
ಮೊಟ್ಟೆಯ ಮಡಿವಳ ಜಗದ ಪಾತಕಗಳ |
ತೊಟ್ಟು ಪರಮೇಶ್ವರಿ ರಾಮರಾಮಾ ||

ಕಲುಷದ ತವರೂರು ಮಣ್ಣಿನ ಬಸುರಲಿ |
ಸೆಲೆನೀರಿನಂತಿಹಳು ರಾಮರಾಮಾ ||
ಮಲಿನದ ನೆಲೆವೀಡು ಮಾಂಸದ ಮನೆಯಲಿ |
ಮೊಲೆಹಾಲಿನಂತಿಹಳು ರಾಮರಾಮಾ ||

ಮೈಲಿಗೆ ಎಂಬುದನು ಮೈದಾಟಗೊಡದಂಥ |
ಶೈಲಿಯನು ಕಲಿಸೆಂದೆ ರಾಮರಾಮಾ ||
ಕಾಲಿಗೆ ಬಿದ್ದೆನು ಕೈಮುಗಿದು ಇದ್ದೆನು |
ನಾಲಿಗೆ ಬಿಗಿದಿಟ್ಟು ರಾಮರಾಮಾ ||

ಉಟ್ಟ ಬಟ್ಟೆಯೊಂದೇ ತೊಟ್ಟ ಬಟ್ಟೆಯೊಂದೇ |
ಮುಟ್ಟಬೇಕಾದಂಥ ರಾಮರಾಮಾ ||
ಬಟ್ಟೆಯೊಂದೇ ಉಂಟು ಜಗದೆಲ್ಲ ಮಡಿವಳರ |
ಬಟ್ಟೆಯೊಂದೇ ಐಸೆ ರಾಮರಾಮಾ ||

ಕಡೆಯ ಲೋಕದೊಳಿಹ ಕರುಳ ಮಡಿವಳ ಗಂಗೆ |
ಜಡೆಬಿಟ್ಟು ಕೆಳಗಿಳಿದು ರಾಮರಾಮಾ ||
ಅಡಿಯ ಉಂಗುಟದಿಂದ ಮುಡಿಯ ಬಾಗಿಲು ತೆರೆದು |
ಕುಡಿವಾಲಿನಂದದಿ ರಾಮರಾಮಾ ||

ಮೊಸಲ ತೊರೆಯಾಗಿ ಈಸಲ ಬಂದಿದೆ |
ಸೂಸಲ ನೆರೆಯಲ್ಲಿ ರಾಮರಾಮಾ ||
ಬೀಸಲು ಮನದಲ್ಲಿ ಉತ್ಸಾಹ ಜೀವಾಳ |
ಈಸಲು ಬಿದ್ದಿತು ರಾಮರಾಮಾ ||

ಪಕ್ಷಿತೀರ್ಥದ ಮೇಲೆ ಪಾಯಸವಿಡುವಂತೆ |
ಪಕ್ಷಿಗಳಿಗಾಗೆಂದು ರಾಮರಾಮಾ ||
ನಕ್ಷತ್ರದೊಡೆಯನು ನಿನಗಿಲ್ಲಿ ಪಾವಿತ್ರ್ಯ |
ಅಕ್ಷಯವಾಗಿಡಲಿ ರಾಮರಾಮಾ ||

ಅಣ್ಣೆಯಗಡಲಿನ ತಣ್ಣನ್ನ ತಿಳಿಯಲ್ಲಿ |
ಬೆಣ್ಣೆಯಾಗುತ ತೇಲು ರಾಮರಾಮಾ ||
ಅಣ್ಣನ ಮಣ್ಣಿನ ಮೈಯಂತು ಮೈಯೆಲ್ಲ |
ಕಣ್ಣಾಗಿ ಹೊಳೆಹೊಳೆ ರಾಮರಾಮಾ ||

ತಾಯ್ಗರೆದ ಕಂಬನಿ ಬಾಯ್ದೆರೆದ ಸಿಂಪಿನಲಿ |
ಕಾಯ್ಗೊಂಡು ಹಣ್ಣಾಗಿ ರಾಮರಾಮಾ ||
ಮೈಗರೆದ ಮುದ್ದಲ್ಲಿ ಮೈದೆರೆದು ಮುತ್ತಹುದು |
ಕೈಯ್ಗಾರಿಯಾರಿವಳು ರಾಮರಾಮಾ ||

ಕಡಿಯಂತು ಕಡಿಯೆಲ್ಲ, ಹುಡಿಯಂತು ಹುಡಿಯೆಲ್ಲ।
ಹುಡಿಯ ಗೂಡಹುದ್ಯೆಸೆ ರಾಮುರಾಮಾ ॥
ಗುಡಿಯೆ ಮಡಿಯ ನಾಡು ಎಂದೆಂಬ ಜಾಣರ ।
ನುಡಿಯ ಒಳವೇನಿಹುದು ರಾಮುರಾಮಾ ॥

'ಮುಡಿಯ ಕುಡಿಗೇ ಗುಡಿ ಗುಡಿಯ ಅಡಿಗೇ ಮುಡಿ ।'
ನುಡಿಯೊಂದು ದಿಟವುಂಟು ರಾಮುರಾಮಾ ॥
ಕಡೆಮುಟ್ಟುವೀ ಮಾತು ನನ್ನ ಪಾಡಿನ ಪಲ್ಲ।
ಕಡೆವರೆಗಾಗಿರಲಿ ರಾಮುರಾಮಾ ॥

ಮೀಟೂದ ಮುಡಿಯೊಂದು ನಿಖಿಲ ಪಂಥಕ್ಕೆಲ್ಲ ।
ಕೂಟನಂತಿರುವದು ರಾಮುರಾಮಾ ॥
ಕೂಟಕೂಟಗಳುಂಟು ಜೀವ ಜೀವಾಳದ ।
ಬೇಟದ ಪರಿಯಂತೆ ರಾಮುರಾಮಾ ॥

---

# ಹರಕೆ

ಎರೆಯುವೆನು ಬಾ ನಿನ್ನ, ನಮ್ಮ ಪಟ್ಟದ ಮರಿಯೆ
ಸಕಲ ತೀರ್ಥದ ಕ್ಷೀರ ನೀರ ತಂದು.
ಬೆರಗಾಗಿ ಬೆರೆತು ಆ ಶಿವನಲ್ಲಿ, ದೇವನಲಿ
‘ ಪಡದಪ್ಪನಾಗು ’ ಎಂದು.

ನಿಃಸಂಗಳಿದ್ದ ಈ ಗುಪ್ತಗಂಗೆಯ ನನ್ನ
ಶಾಲ್ಮಲೆಯ ನೀರ ತಂದು.
ನಿಃಶಂಕನಾಗಿ ಬೆರೆಯೆಂದು ಎರೆಯುವೆನಿಂದು
‘ ಪಡೆದಪ್ಪನಾಗು ’ ಎಂದು.

ಹರಿಹರರ ಕಾಲ್ತೊಳೆವ ದಕ್ಷಿಣದ ಗಂಗೆಯೀ
ತುಂಗಭದ್ರೆಯ ಪುಣ್ಯಜಲವ ತಂದು.
ಎರೆಯುವೆನು ನಿನ್ನನ್ನು ಸಮರಸಿಯು ಆಗೆಂದು
‘ ಪಡೆದಪ್ಪನಾಗು ’ ಎಂದು.

ನಮ್ಮ ತಾಯಿಯ ಸೆರಗಿನಂಚಾಗಿ ಹರಿದಿದ್ದ
ಭವ್ಯಗೋದೆಯ ದಿವ್ಯಜಲವ ತಂದು
ತಮ್ಮ ಎರೆಯುವೆ ಸೆರಗುಬೆರಗಿಲ್ಲದಂಥ ಕಲಿ-
‘ ಪಡೆದಪ್ಪನಾಗು ’ ಎಂದು.

ನಮ್ಮ ತಾಯಿಯ ದಿವ್ಯ ಶ್ರೀರಂಗ ಪಾದವನು
ತೊಳೆವ ಕಾವೇರಿಯಾ ನೀರ ತಂದು
ತಮ್ಮ ಎರೆಯುವೆನು ಶ್ರೀಪಾದರೇಣುವೆ ಬಾರೊ
‘ ಪಡೆದಪ್ಪನಾಗು ’ ಎಂದು.

ಇಟ್ಟಿಗೆಯ ಮೇಲೆ ಅಡಿಯಿಟ್ಟ ವಿಠ್ಠಲನನ್ನು
ಬಿಟ್ಟು ಮುಟ್ಟುವ ನದಿಯ ನೀರ ತಂದು
ಮೆಟ್ಟು—ಭಕ್ತಿಯ ಮೆಟ್ಟು—ಎರೆಯುವೆನು ನಾನಿಂದು
‘ ಪಡೆದಪ್ಪನಾಗು ’ ಎಂದು.

ಘಟ್ಟ ಮಲೆಗಳ ಬಿಟ್ಟು, ತಾರಕರ ಬಿರುದಿಟ್ಟು
ಹರಿವ ನದಿಗಳ ಮಡಿಯ ನೀರ ತಂದು
ಬಿಟ್ಟುಬಿಡದಲೆ ನಾನು ಎರೆಯುವೆನು ನಿನ್ನನ್ನು
‘ ಪಡೆದಪ್ಪನಾಗು ’ ಎಂದು.

ಕರಿನಾಡ ಕನ್ಯೆ ಈ ಕೃಷ್ಣೆ ಕೇಳುವದೇನು ?
ನಿನ್ನ ಕೂಡಲದಿಂದ ನೀರ ತಂದು
ಎರೆಯುವೆನು—ಅರಿವಾಗು—ತಾನೆ ತಾನಾಗಿನ್ನು
' ಪಡೆದಪ್ಪನಾಗು ' ಎಂದು.

ಕನ್ನಡದ ನಾಡ ಕವಿಕುಲತಿಲಕರಾ ಕಾವ್ಯ
ಗಂಗಾಪ್ರವಾಹವೆಲ್ಲಿಂದ ಬಂತೋ
ಘನ್ನ ತೀರ್ಥಂಕರರ ಆ ಪೂಜ್ಯಪಾದಗಳ
ತೀರ್ಥದಿಂದೆರೆಯುವೆನು ನಿನ್ನನಿಂತೋ.

ಕಲ್ಯಾಣದಧ್ಯಕ್ಷನಾದ ಪ್ರಭು ಅಲ್ಲಮನ
ಗುರುಪಾದ ತೀರ್ಥ ತಂದು
' ಕಲ್ಯಾಣ ಕಲ್ಯಾಣ ' ಎರೆಯುವೆನು ಶಿರಬಾಗು
ಶಿವಶರಣನಾಗು ಎಂದು.

ಉಡುಪಿಯೊಡೆಯನ ಅಡಿಯನುಡುಪು ಮಾಡುವ ನಮ್ಮ
ಆನಂದತೀರ್ಥ ತಂದು
ಮುಡಿಯಲ್ಲಿ ಧಾರೆಯಾಗಿಡುವೆ ಪುರುಷೋತ್ತಮನ
ದಾಸ ನೀನಾಗು ಎಂದು.

ಹಂಪುಗೊಳಿಸುವ ದೇವಿಯೊಲಿದ ಮಾಧವನ ವಿ–
ದ್ಯಾತೀರ್ಥವನ್ನು ತಂದು
ಹಂಪು ಪಡೆಯೆಂದು ನಾ ಎರೆಯುವೆನು ನೀ ಸರ್ವ–
ಸಂನ್ಯಾಸಿಯಾಗು ಎಂದು.

ಈ ನಾಡು ಅವನ ಹೊಲ ! ಇದರವೊಕ್ಕಲಿಗನವ
ನಾ ನೀನು ರಂಟೆ ಕುಂಟೆ.
ಏನಾದರೇನು ಗೆಲವಿಹುದು ನೀನಿರಬೇಡ
ಸೋಲೆಂಬ ಚಿಂತೆಗಂಟೆ.

ಜಗದ ಪಟ್ಟವನೇರಿ ಕುಳಿತಿಹ ಜಗದ್ಗುರುವು
ನಮ್ಮ ಕರುನಾಡಿನಲಿ ಕಾಲನಿಟ್ಟು
ಮುಗಿದು ಎದೆಮುಗುಳನ್ನು ಅಡಿಯ ಹುಡಿಯಾಗೋಣ,
ಇಲ್ಲ ಸಲ್ಲದ ಬಗೆಗಳೇಕೆ ಇಷ್ಟು ?

'ಸೋಲು' ಎಂಬುದು ಕೇಳು ಮೃತ್ಯುಲೋಕದ ಸೊಲ್ಲು
'ಗೆಲವು' ಒಂದೇ ಬಲ್ಲ ನಮ್ಮ ನಲ್ಲ.
'ಸೋಲು' ಹುಂಬರ ಗುಲ್ಲು 'ಗೆಲವು' ಕಾಣ್ಬರ ಸೊಲ್ಲು
ಸೋಲುವವ ತಾನೆಂದು ಶರಣನಲ್ಲ.

ಉಸುರು ಉಸುರಿಗೆ ಅವನ ಹೆಸರ ಸಾರುತ್ತಿರುವ
ಗಾಳಿಯಂದದಿ ನಾವು ಚರಿಸಬೇಕು.
ಹೆಸರು ಹೆಸರಿಗೆ ಅವನ ಕುಸುರು ತೋರುವ ಹಾಗೆ
ಬೆಳಕನ್ನು ಸುರಿಸಬೇಕು.

ತಾಪ ಕಂಡಲ್ಲೆಲ್ಲ ನಮ್ಮ ಸಂಪ್ರೀತಿಯನು
ನೀರಾಗಿ ಹರಿಸಬೇಕು.
ಪಾಪ ! ಪತಿತರ ಕಂಡು ಕೈನೀಡಿ ನೆಲೆಗೊಟ್ಟು
ನೆಲವಾಗಿ ಧರಿಸಬೇಕು.

ಅಣುರೇಣು ತೃಣಕಾಷ್ಠ ಪತಿತಪಾವನರ ಮುಗಿ–
ಲಾಗಿ ಆವರಿಸಬೇಕು.
ಅಣುವಿಗೂ ಅಣುವಾಗಿ ಮುಗಿಲಿಗೂ ಮುಸುಕಾಗಿ
ಅವನ ಆಜ್ಞೆಯ ನಾವು ಸ್ಮರಿಸಬೇಕು.

ಪಡೆದಪ್ಪನಾಗದೇ ದುಡಿದಪ್ಪನಾದವಗೆ
ಚಿಂತೆ ನೆರೆಯುವದೊಂದು ಸಂತೆಯಾಗಿ.
ಪಡೆದು ದುಡಿದವ ಜಾಣ ವ್ಯಸ್ತನಾದವ ಕೋಣ
ಆಗಬಾರದು ಹಿಂತೆ-ಮುಂತೆಯಾಗಿ.

ದೇವನಲ್ಲಿ ನಿವೃತ್ತಿ, ದೇವನಿಂದೆ ಪ್ರವೃತ್ತಿ
ಈ ಹಾದಿಯರಿಯಬೇಕು.
ಜೀವಬಂಧುವೆ! ಕೇಳು, ಉಳಿದ ಜಂಜಾಲವನು
ತಾನಾಗಿ ಮರೆಯಬೇಕು.

* * * *

ಗುರುವಂ ಮರೆಯಬೇಡೈ ಗೆಳೆಯಾ ! ಗುರುಬಂಧುವೇ ।
ಅರುಹಂ ತೊರೆಯಬೇಡೈ ಒಲವೇ ! ಸ್ನೇಹಸಿಂಧುವೇ ।।

---

# ಚಳಿ ಇರಲಿ ಮಳೆ ಬರಲಿ

ಚಳಿ ಇರಲಿ ಮಳೆ ಬರಲಿ
ಮಂಜು ಸುರಿಯುತಲಿರಲಿ
ಬಿಸಿಲು ಕುದಿಸುತಲಿರಲಿ
ಮುಮ್ಮುಖದ ಋತುಮಾನ ಹೇಗು ಇರಲಿ ಽ ಽ
ನಗುತ ಒಲಿವೆವು ನಾವು
ನಗುತ ಒಲಿಸುವೆವು ಽ ಽ ಽ

ಏನೆ ಕಷ್ಟವು ಬರಲಿ, ಎಂಥ ನಷ್ಟವೆ ಇರಲಿ
ಇಷ್ಟವು ಅನಿಷ್ಟವೂ ಕೂಡಿ ಬರಲಿ ಽ ಽ
ದುಮ್ಮಾನ ಕಳೆವಂತೆ ಸುಮ್ಮಾನ ಹೊಳೆವಂತೆ
ಹಾಡಿ ನಲಿವೆವು ನಾವು
ಹಾಡಿ ನಲಿಸುವೆವು ಽ ಽ ಽ

———

# ನೃಸಿಂಹ ಸ್ತೋತ್ರ

ಡಿಂಭದ ಈ ಕಂಭದೊಳಗೆ ತಾವು ಅಡಗಿ ಇರುವಿರಿ
ನಂಬಿರುವೀ ಎದೆಹೂವನೆ ಆಸನ ಮಾಡಿರುವಿರಿ
ವೈರಿಯಿಂದ ಕಾಯಬೇಕು ಕರುಣಿಸುತ್ತ ಸದ್ಗುರೋ
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್ ||

ದೋಷವನ್ನು ನಾಶಗೈದು ಭಕ್ತಿಯನ್ನು ಪೋಷಿಸೆ
ಭಕ್ತಹೃದಯದಲ್ಲಿ ಸದಯನಾಗಿ ನಿಂತ ದೇವನೇ
ಏನು ಬಂದರೇನು ತಾವೆ ಕಾವಿರೆಂಬ ಭಾವನೆ
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್ ||

ಮರೆವಿನಿಂದ ಇದ್ದೆ ನಾನು ಅರಿವ ಹವಡಿ ಬಂದಿರಿ
ಅರಿವಿನ ಅರವಿಂದವಾಗ ಹೊರಳಿ ಅರಳಿ ಬಂದಿತು
ಅಂದಿನ ಮಕರಂದವಿಂದಿಗಾನಂದವ ಕೊಡುತಿದೆ
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್ ||

ಮರೆವುದೇನು ಜಡದ ಧರ್ಮ, ನಾನು ಮರೆತೆನೆನ್ನಿರಿ
ಅರೆವು ಮಾಡಿ ಕೊಡಿರಿ ಎನಗೆ, ತಾವು ನನ್ನ ಬಿಡುವಿರೆ?
ತಾವೆ ಕೈಯ ಬಿಟ್ಟಮೇಲೆ ದೆಸೆಯಾವುದು ಹಸುವಿಗೆ?
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್ ||

ನಾನು ಒಡಲು ತಾವು ತ್ರಾಣ, ನಾನು ಉಸಿರು ಆಗಿರೆ
ತಾವು ಪ್ರಾಣವಾಗಿ ಕಾದು, ನಾನು ಚಿತ್ತವೆಂದೆನೆ
ತಾವು ಧ್ಯಾನವಾಗಿ ನಿಂತು ಹತ್ತರೆಳೆದುಕೊಳ್ಳಿರೇ
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್ ||

ಮುಡಿಪಿನ ಸಂಕಲ್ಪವನ್ನು ಜೀವನಿಂದ ಮಾಡಿಸಿ
ಜನ್ಮಜನ್ಮದಿಂದ ಬಂದ ಕರ್ಮಗಳನು ಓಡಿಸಿ
ದೇಹಪ್ರಾಣಮನಗಳನ್ನು ತಮ್ಮ ವಶಕೆ ಕೊಳ್ಳಿರಿ
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್ ||

ನಾನು ಕಾಲುಮಣೆಯು ತಮ್ಮ ಮಹಾಪಾದ ಪೀಠಕೆ
ತಮ್ಮಡಿಗಳು ಮುಟ್ಟಿದೊಡನೆ ಅರಳಿ ಕಮಲವಾದೆನು
ಆ ಕಮಲದಲ್ಲಿ ತಾವು ಕಮಲೆಯೊಡನೆ ವಾಸಿಸಿ
ನಾರಾಯಣ ನಾರಾಯಣ ಹೇ ನೃಸಿಂಹ ಪಾಹಿ ಮಾಮ್ ||

ಅಣುರೇಣುವು ತಮ್ಮದಿಹುದು, 'ನಾನು' ಎಂಬುದಾಟವು
ತಾವೆ ಜೀವನಾವೆಯಲ್ಲಿ ಕ್ರೀಡೆಯಾಡುತಿರುವಿರಿ
ತಾವು ನಮ್ಮ ರೇವು ನಾವು ಎತ್ತ ಹೋಗಿಬಂದರು
ನಾರಾಯಣ ನಾರಾಯಣ ಶ್ರೀನೃಸಿಂಹ ಪಾಹಿ ಮಾಮ್ ||

ಶ್ರೀ ಗುರುಪ್ರಸಾದೋಽಸ್ತು । ಶ್ರೀ ಮಾತೃಪ್ರಸಾದೋಽಸ್ತು ।
ಭದ್ರಂ ಶುಭಂ ಮಂಗಳಂ.

---

# ದರಿದ್ರನಾರಾಯಣ

೧

ಗಾಂಧೀಜಯಂತಿ ದಿನ ಸತ್ಯವನ್ನಾಡೋಣ
ಸುಳ್ಳಿಗೋ ಇಡಿ ವರುಷ ತೆರವೆ ಇಹುದು.
ಬಡತನವು ಬದುಕಿಹುದು, ಯಾರು ಇಲ್ಲೆನಬಹುದು,
ಯಾವ ತಂತ್ರಕ್ಕೆ ಅದು ಅಡಗಲಹುದು ?

೨

ನದಿನೀರು ಹರಿಯುತಿದೆ, ನೆಲಹುಲ್ಲು ಬೆಳೆಯುತಿದೆ,
ಮಾನವನ ಸಂತತಿಗೊ ಲೆಕ್ಕವಿಲ್ಲ.
ಬಲುದೊಡ್ಡ ಹೆಸರಿನಲಿ ಸಣ್ಣ ಕೆಲಸಗಳೇಕೆ ?
ಬಡತನವು ಇದ್ದುದಕೆ ದುಃಖವಿಲ್ಲ.

೩

ಸರ್ವೋದಯವು ಹೌದು, ಪರ್ವೋದಯವು ಹೌದು,
ಗರ್ವೋದಯವು ಮಾತ್ರ ಅಸ್ತಿಭಾರ.
ಕೆಲಸವಿಲ್ಲದ ಬಡವ ಕೈಗೊಂಬೆಯಾಗುವನು
ಕಿಳ್ಳಿಕೇತನ ಹಿಂದೆ ಸೂತ್ರಧಾರ.

೪

ಗಾಂಧಿ ಹುಟ್ಟಿರಬಹುದು, ಯೇಸು ಸತ್ತಿರಬಹುದು,
ಬುದ್ಧ ಅತ್ತಿರಬಹುದು ಧರ್ಮ ಹೇಳಿ.
ದೈವುಳ್ಳವರು ಅಹುದು, ದಯವುಳ್ಳವರು ಅಹುದೊ?
ಬಡತನವು ಬದುಕಿಹುದು ಹೇಳಿಕೇಳಿ.

೫

ರಾಮರಾಜ್ಯವು ಆಯ್ತು, ಧರ್ಮರಾಜ್ಯವು ಹೋಯ್ತು,
ಬಳಿರಾಜ್ಯವಿಹುದು ಪಾತಾಳದಲ್ಲಿ.
ರುದ್ರತಾಂಡವದಲ್ಲಿ ಪ್ರೇತಗಳೆ ಕುಣಿಯುವವು
ಭೂತಗಳ ಮೇಳದಲಿ ತಾಳವೆಲ್ಲಿ?

೬

ಕೂಲಿಕುಂಬಳಿ ಕಷ್ಟ, ಅನ್ನವೋ ಅಪರೂಪ,
ಮಾನಕ್ಕೆ ತೆರೆ ಸಾಕು ಲಾಂಗು ಲಂಗೋಟಿ.
ಸಾವಿರದ ಲೆಕ್ಕದಲಿ ಬದುಕುಳ್ಳವರ ಬಾಳು
ಲಕ್ಷದೊಳಗೇ ಬರದು ಕೋಟಿ ಕೋಟಿ.

೭

ಕಳ್ಳರಿಗೆ ಸೆರೆಮನೆಯು, ಸೂಳೆಗೋ ಅರಮನೆಯು,
ಬೈರಾಗಿ ದಂಪತಿಗೆ ಧರ್ಮಶಾಲೆ.
ಬಡವರಿಗೆ ಬಯಲೆ ಗತಿ ಜನನ–ಮರಣಕ್ಕೆಲ್ಲ,
ಉಳ್ಳವರ ಲೋಭ ಬಡತನದ ಮೂಲೆ.

೮

ಬಡತನದ ಸಸಿಗೆ ನೀರೆರೆಯಬೇಡೆಲೊ ಗೆಳೆಯ !
ಬಡತನಕೆ ಉಪಕಾರಿ, ಸಾಕು ಜಂಭ.
ನಿನ್ನ ಸೇವೆಯ ಪುಣ್ಯದಿಂದ ಹಬ್ಬಿಹುದಣ್ಣ
ಬಡತನದ ಹುಲುಸುಬೆಳೆ ಜಗದ ತುಂಬ.

೯

ಬಹುಜನರ, ಬಡಜನರ, ಅಜ್ಞಾನಿ ದುಡಿತವನೆ
ಬಂಡವಾಳವ ಮಾಡಿ ಶ್ರೇಷ್ಠಿಯೆನಿಸಿ
ದಾನಧರ್ಮವು ಎಂದು ಸೇವೆ ತ್ಯಾಗವು ಎಂದು
ಈ ಆಟ ಹೂಡದಿರು ಕೀರ್ತಿ ನೆನಿಸಿ.

೧೦

ಕಾಯಕವು ಕೈಲಾಸ, ಭಕ್ತರಿಗೆ ಉಪವಾಸ,
ಶರಣರಿಗೆ ವನವಾಸ ಉಳಿವಿ ಹಾದಿ.
ಎಲ್ಲೆಲ್ಲೊ ಇದ್ದವರಿಗಲ್ಲಲ್ಲಿ ಮಣ್ಣಾಯ್ತು,
ಬಸವಣ್ಣನವರಿಗೋ ಜಲಸಮಾಧಿ.

೧೧

ಮುಸುಲನಾದರು ಏನು, ಕ್ರೈಸ್ತನಾದರು ಏನು,
ಸುಡುಗಾಡು ಸೇರಿದರು ಬಿಕ್ಕೆ ಬಿಡದು.
ದಾನಕ್ಕೆ ಪಾತ್ರಗಳು ಹಲಕೆಲವು ಇರಲೆಂದು
ದೈವಪೂಜಕರ ಕೈ ಭಿಕ್ಷೆ ಕೊಡದು.

೧೨

ಧನಪತಿಯು ಎಂದಿಗೂ ರಾಜನು ಮಹಾರಾಜ
ಶಕ್ತಿ ಪತಿ ಶಿವನಿಗೋ ತಿರುಕ ರೂಪ.
ಮೂಲೋಕ ತುಂಬಿದವ ಕುಳ್ಳನಾದನು ಬೇಡಿ
ಕೊಡುವವನ ಕೈ ಮೇಲು ಬಲಿಯೆ ಭೂಪ !

೧೩

ಕಣ್ಣು ಇದ್ದೂ ಕುರುಡು, ಕಿವಿಯು ಇದ್ದೂ ಕಿವುಡು,
ಎದೆಯು ಇದ್ದೂ ಕೂಡ ಜೊಳ್ಳುಪೊಳ್ಳು.
ದುಡ್ಡು ದುಡಿವವರ ಕುಣಿಸುತ್ತಲಿದೆ ಇದು ಸತ್ಯ
ಬಡತನದ ತತ್ತ್ವ ಅಪ್ಪಟಿಯ ಸುಳ್ಳು.

೧೪

ಜನತಾಜನಾರ್ದನಾ ! ದರಿದ್ರ ನಾರಾಯಣಾ !
ಅಳಬುರಕ ರಾಮಾಯಣಾ ! ಮತ್ತೆ ಮತ್ತೆ ಪಾರಾಯಣಾ !
ಶಿವಾ ಶಿವಾ ಮಾದೇವ ಶಿವಾ ! ಕಣ್ಣಿಲ್ದವರಿಗೆ ನೀನೆ ಶಿವಾ !
ಯಾ ಅಲ್ಲಾ ! ಬಡತನದಷ್ಟು ಸಿರಿತನವಿಲ್ಲಾ !
Oh God ! if thou art
Tell man, if he has a heart.

೧೫

ಯಾವ ಭಾಷೆಯಲು ಎಷ್ಟು ಕೂಗಿದರು
ಬಡತನವಾಗದು ನಿರ್ಬೀಜ !
Virus, Parasite ಸಂಪತ್ ವೃದ್ಧಿಗೆ
ಪ್ರಾಣಿಗೊಬ್ಬರವು ಇದೇ ನಿಜ.

೧೬

ದಾರಿದ್ರ್ಯವನೇ ನಷ್ಟಗೊಳಿಸೆ ಬಾ
ಬೇಡ ದರಿದ್ರರ ಸೇವೆ!
ಪರೋಪಕಾರಕೆ ಅದನಿರಿಸಿರುವಾ
ಹೃದಯದರಿದ್ರರು ನಾವೇ.

೧೭

ದುಡಿವರಿಗೆಲ್ಲಾ ಕೆಲಸವ ನೀಡು
ಹಸಿದವರಿಗೆ ಅನ್ನ.
ಹೆಣ್ಣಿಗೆ ಕೂಸಿಗೆ ಆಸರ ನೀಡು
ಈ ವಿದ್ಯೆಯೆ ಚೆನ್ನ.

೧೮

ಶೀಲಕೆ ಬೆಲೆ ಕೊಡು, ವಶೀಲಿ ನಿಲ್ಲಿಸು,
ಗುಣಗೌರವ ಮಾಡು.
ದೊಡ್ಡಸ್ತಿಕೆಯಲಿ ಮೆರೆಯದಿರಣ್ಣ,
ಸಹೃದಯತನ ಬೇಡು.

೧೯

ಇಕೋ ನೆಲ—ಅಕೋ ಜಲ
ಅದರ ಮೇಲೆ ಮರದ ಫಲ
ಮನದೊಳಿಪೆ ಪಡೆವ ಛಲ
ಬೆಳೆವಗೆ ನೆಲವೆಲ್ಲ ಹೊಲ

ಜಲಧಿವರೆಗು ಒಂದೆ ಕುಲ
ಅನ್ನವೆ ಧರ್ಮದ ಮೂಲ
ಪ್ರೀತಿಯೆ ಮೋಕ್ಷಕ್ಕೆ ಬಲ
ಇದೇ ಶೀಲ ಸರ್ವಕಾಲ
ಇಕೋ ನೆಲ—

೨೦

ಲಕ್ಷ್ಮೀಪತಿಯನು ಜ್ಯೇಷ್ಠಾದೇವಿಯ ಗಂಡನ ಮಾಡದಿರಣ್ಣ
ವಸುಂಧರೆಯನೇ ಬಂಜೆಯು ಎನಿಸಿ ಏನೋ ಹಾಡದಿರಣ್ಣ
ಮೋಹನದಾಸ ವಿವೇಕಾನಂದರು ಎಂದರು ಏನೋ ತಾವೇ
ಬಡವರ ಕಟ್ಟುವ ಕೆಲಸವು ನಡೆದಿದೆ, ಎನಿಸುತ ಬಡವರ ಸೇವೆ.

೨೧

ದರಿದ್ರನಾರಾಯಣನ ಸೇವೆಯೊ ಅದುವೇ ದೃಷ್ಟಿಯ ಗೊಂಬೆ
ಬಡತನ ಕಣ್ಣಿಗೆ ಬೀಳುವವರೆಗೂ ಈ ತಿರುಮಂತ್ರವ ನಂಬೆ
ಅಮೇರಿಕೆಯ ಧನತತ್ತ್ವವೆ ಇರಲಿ, ರಷಿಯದ ಜನಹಿತತತ್ತ್ವ
ಮಾನವ ಮನತತ್ತ್ವವೆ ಹೀರುತ್ತಿದೆ ಬಡವರ ಪ್ರಾಣದ ಸತ್ತ್ವ.

———

# ಯೌವನದ ಕನಸು

‘ ಭೂವೈಕುಂಠ ’ ‘ ಭೂಕೈಲಾಸ ’ ಎಂದು ಹಾಡಿ ಹೋದವರುಂಟು;
ನೋಡಿ ನಲಿದವರಿಲ್ಲ.
ಹಸಿವೆಯ ಸೆರೆಯಿರುವ ವರೆಗೆ, ಮೈಗೆ ಬಿಡುಗಡೆಯಿಲ್ಲ;
ಅನ್ನವು ಸ್ವಾಧೀನವಾಗಲಿ.
ಸಾವಿನ ಸೆರೆಯಿರುವವರೆಗೆ, ಸಂತತಿಗೆ ಬಿಡುಗಡೆಯಿಲ್ಲ;
ಪ್ರಾಣವು ಸ್ವಾಧೀನವಾಗಲಿ.
ಸಂಶಯದ ಸೆರೆಯಿರುವವರೆಗೆ, ತಿಳುವಳಿಕೆಗೆ ಬಿಡುಗಡೆಯಿಲ್ಲ;
ಸತ್ಯವು ಸ್ವಾಧೀನವಾಗಲಿ.
ಅನ್ನದ ಮೇಲೆ ಅನ್ಯರ ಅಧಿಕಾರ ಬೇಡ; ಅನ್ನವು ಸ್ವತಂತ್ರವಾಗಲಿ.
ತನ್ನ ಅನ್ನವ ಪಡೆಯುವದೇ–ಒಕ್ಕಾಲು ಧರ್ಮ !
ಜೀವದ ಮೇಲೆ ಮುಪ್ಪಿನ ಒತ್ತಾಯ ಬೇಡ; ಜೀವನವು ಸ್ವತಂತ್ರವಾಗಲಿ.
ಇಚ್ಛೆಯ ಮರಣ ಹೊಂದುವದೇ–ಇಕ್ಕಾಲು ಧರ್ಮ !
ಸತ್ಯದ ಮೇಲೆ ಒತ್ತೆಯ ಮುದ್ರೆ ಬೇಡ; ಸತ್ಯವು ಸ್ವತಂತ್ರವಾಗಲಿ.
ನಿಜ ಸತ್ಯದಂತೆ ನಡೆಯುವದೇ–ಮುಕ್ಕಾಲು ಧರ್ಮ !
ಇನ್ನುಳಿದುದು–ಅಧರ್ಮ ! ಅಧರ್ಮ ! ಅಧರ್ಮ !
ಅನ್ನ ದಾಟಿ, ಮುಪ್ಪ ಮೀರಿ, ಸತ್ಯ ಸೇರಿದಾಗ ಆತ್ಮದ ಉದಯ.
ಅಲ್ಲಿಯ ವರೆಗೆ—
ಯೌವನದ ಕನಸು; ಪುರಾಣದ ಸ್ವರ್ಗ.

———

# ಧ್ರುವಮಾರ್ಗ

ದೇಹದಲ್ಲಿ ವೈದೇಹಲೀಲೆ ಸುರಸಾರ್ವಭೌಮುದೆಡೆಯೆ.
ಶ್ರೇಯಪ್ರೇಯಗಳ ದ್ವಂದ್ವ ನಡೆದು ನಿರ್ದ್ವಂದ್ವ ಐಕ್ಯಪಡೆಯೆ.
ಸುರುಚಿಯಲ್ಲಿ ಉತ್ತಮನ ಪಡೆದನುತ್ತಾನಪಾದ ರಾಜ.
ಆ ಸುನೀತಿ ಧ್ರುವನನ್ನು ಹಡೆದು ವನವಾಸಿಯಹುದು ಸಾಜ.

ಗಗನಗಾಮಿ ನಾರದನ ವಿಣೇಗಾ ಧ್ರುವನ ಸ್ಪರ್ಶವಾಗಿ
ಬಂದ ನಾರದನು ಬಾಲಮನುವಿನೆಡೆ ದಿವ್ಯ ಹರ್ಷವಾಗಿ.
ಅಹುದಹುದು ಮೀರೆ ವಿಜ್ಞಾನಧೀರೆ, ಅರವಿಂದ ತೆರೆದಿತಣ್ಣ.
ಪಾಟಲದ ಪಟಲ ನವಸ್ಫೋಟವಾಗಿ ಹೊಸದಾಗಿ ಏಳು ಬಣ್ಣ.

ಭೂಮಿ ಬೆಳೆದಂತೆ ಸ್ವರ್ಗ ಇಳಿದಂತೆ ಕ್ಷಣವು ಪರ್ವವಾಗೆ
ಆನಂದ ಕಟ್ಟೆ ಹೊಸಜೀನ ಹುಟ್ಟೆ ಅವತಾರವಾದ ಹಾಗೆ
ನರನ ಹೃದಯ ನಾರಾಯಣಾಗ್ನಿ ಒಲದೀಯೆ ಬಂತು ವರವು
ಮೂರು ಸಪ್ತಕವ ಮೀರಿ ಇರುವ ಆ ಅಪೂರ್ವ ಸ್ವರವು.

ಸಪ್ತ ಋಷಿಗಳೇಳೆತ್ತು ತಿರುಗುತಿವೆ ಹಾಕಿ ಧ್ರುವದ ಗಾಣಾ.
ಮೇರು ದಂಡದಾ ಇಕ್ಷುರಸವು ಹಿಂಡುತ್ತಲಿಹುದೊ ಜಾಣಾ.
ವಿವಿಧವಾಗಿ ಸಂಚರಿಸಿ ಠಾಯಿಯಲಿ ಬ್ರಹ್ಮದೇಕತಾನಾ
ಕರೆಯುತಿಹುದು ಸ್ವರಮೇಳಕಾಗಿ ಗ್ರಹಗೋಲ ವಿಶ್ವಗಾನಾ.

———

# ಪ್ರತಿವರ್ಷದಂತೆ ಬಂತುಽ, ಶ್ರಾವಣಾ

ಅಹಹಹಾ ಬಂತು ಶ್ರಾವಣಾ
ಜಗದ ಜೀವನಾ
ಕರುಳ ಹೂವಣಾ.
ಹೊರಳಿ ಬಂತು
ಹಸಿರಾಗಿ ಪಸರಿಸಿಂತು.

ಇದು ವಿಶ್ವಜೀವದಾಕರ್ಷ
ಹೊಮ್ಮಿತೋ ಹರ್ಷ
ಏನು ಪ್ರತಿ ವರ್ಷ–
ದಂತೆ ಬಂತು
ಮೈದಾಳಿದಂತೆ ಕಂತು.

ಈ ಮೋಡದೊಡ್ಡಿನ ಮ್ಯಾಲಾ
ಮಂಜಿನ ಖ್ಯಾಲಾ
ಹೊಚ್ಚಿಕೊಂಡ ಶಾಲಾ
ಗಿರಿಯ ಜಾಲಾ
ನಿಂತಽದ ಮಳಿಯ ಮ್ಯಾಳಾ.

ಇದು ನೆಲದ ಗರ್ಭದಾ ಹೊನ್ನು
ನೀಲಿ ನೀರನ್ನು
ಕುಡಿದು ಹಸಿರನ್ನು
ಉಗುಳಿತಿಂತು
ಜಗ ನೋಡತೊದ ನಿಂತು.

ಇದು ಎಂಥ ಹಸುರಿನ ಕಂಪ
ತಿಳಿಯದ ತಂಪ
ಮೂರ್ತ ಜಗಜಂಪ
ತೂರ್ತ ಬಂದು
ಮನಪೂರ್ತವಾಗಿ ಸಂದು.

ಬೆಳಿಗೆಲ್ಲಾ ಹಸುರೆ ಕಾರಣಾ
ಹೃದಯದ ಕಣಾ
ಆಗತವ ಹೆಣಾ
ಹಸಿರು ನಂದಿ
ಹಸಿ ಹೀರಿ ಬಿಸಿಯ ಹೊಂದಿ

ಅಹಾ ಭೂಮಿ ತಾಯಿಯ ಉಸಿರು
ಅವಳ ಆ ಬಸಿರು
ಪಚ್ಚೆಯಾ ಹಸಿರು
(ಕಸುರಾಗಿ) ಬಂತು ಆರತು
ಬುದ್ಧಿಗೇ ಭಕ್ತಿ ಬೆರತು

ಭಲ ಏನು ಬನದ ಕಾವಣಾ
ಸುಳಿವ ಭಾವನಾ
ಹೊಳೆವ ಹಾವಣಾ
ಶ್ರಾವಣಾ ಹೌದೋ
ಇದು ಹೌದು ಶ್ರಾವಣಾ ಹೌದು.

ಬೀಸ್ತಃದ ಶ್ರಾವಣದ ಗಾಳಿ
ಹಿಡಿದ ಹೆಗ್ಗಾಳಿ
ಹೊರಟದಃ ದಾಳಿ
ಶಿವನ ಗಣಕ
ಹುಟ್ಟ್ಯಃದ ಜೀವ ಹೆಣಕ.

ಮದಗುಣಿಕಿ ಊದಿ ತುತ್ತೂರಿ
ಹೇಳತಃದ ಗರಿ
ಹಾಡು ಇದು ಭಾರಿ
ಆತು ಜನಕ
ಮೆಚ್ಚಾತು ಶಿವನ ಮನಕ.

ಶ್ರಾವಣಕ ತಪ್ಪಿತ ಗ್ಯಾನಾ
ಎಲ್ಲಿದೋ ಧ್ಯಾನಾ
ಹುಚ್ಚ ಆಗ್ಯಾನಾ
ಮದೋನ್ಮತ್ತಾ
ಅಂಬಿಕಾತನಯದತ್ತಾ.

———

# ಪ್ರೇಮಬೀಜ

ಇಳೆಯ ಮಕ್ಕಳೆಲ್ಲ ಬನ್ನಿ
ತಾಯ ತವರುಮನೆಗೆ
ಭೇದ ಬಲಿಸಿ ಬಳಲಬೇಡಿ
ಎಂದು—ನನಗೆ ನಿನಗೆ.

ಇದು ಬಿಳಿವೂ ಇದು ಕರಿವೂ
ಹಗಲು ಇರುಳು ಬಣ್ಣಾ.
ಕೆಂಪನಿವಾ ಹಳದಿಯವಾ
ಅಂದಚೆಂದವಣ್ಣಾ.

ಎದೆಯಾಳದ ರಕ್ತದಲ್ಲಿ
ಭಾವದ ಅನುರಕ್ತಿಯಲ್ಲಿ
ಕಾವಿನ ಚಿತ್‌ಶಕ್ತಿಯಲ್ಲಿ
ಕಂಡ ಶಾಂತಿ ಗೀತ,
ಕರೆದು ಜನ್ಮಮರಣಗಳಿಗೆ
ತಾರಕರಾ ಚರಣಗಳಿಗೆ
ಜೀವಾಂತಃಕರಣಗಳಿಗೆ
ನೀಡಿತು ಸುಪ್ರೀತ.

ಪ್ರೇಮಬೀಜ ಮೂಲ ನನೆಗೆ
ಪ್ರೇಮಬೀಜ ಫಲದ ಗೊನೆಗೆ.

———

# ಓ ತಾಯಿ

ಉಪಕಾರದ ಹೊರೆ ಹೆಚ್ಚಾಗಿ
ತಲೆ ಕುಸಿಯುತ್ತಿಹುದು.
ಚಿಂತಾಜ್ವರದಲಿ ಏರಾಗಿ
ಎದೆ ಬೆವರುತ್ತಿಹುದು.

ಮೈಗೇ ಮೈಯೇ ಜಡವೆನಿಸಿ
ಇಳಿಸಲೊ ಎನಿಸುವದು.
ಜೀವವು ಆಜ್ಞೆಗೆ ಕಾಯುತ ತಾಯಿ೦
ನಿನ್ನನೆ ನೆನೆಸುವದು.

———

# ಇರುವೆ-ಅರಿವೆ

ಇರುವೆ, ಇರುವೆ, ಅರಿವೆ, ಅರಿವೆ
ಅಸರಂತವು ಎನುವೆ.
ಎಲ್ಲಿರುವೆ ? ಏನರಿವೆ ?
ಏ ತನುವೇ, ತನುವೇ !

ನಿನಗೆ ನೀನನನ್ಯನೆನಲೊ ?
ನನಗೇ ನಾನನ್ಯ ?
ಅಹಂಮನ್ಯ ವಿಶ್ವಜನ್ಯ
ಹೇಳು ಸ್ವಯಂಧನ್ಯ !

ಈಗಿದ್ದರೆ ಈಗಿಲ್ಲಾ
ಅಲ್ಲಿದ್ದರೆ ಇಲ್ಲಿ ?
ಅರಿವಿನೊಳೇ ಇರವಿದೆಯೊ ?
ಇರವಿದೆ ಅರಿವಲ್ಲಿ ?

———

# ಇದೇ ದೇವ

‘ ಇದೆ ’ ಇದುವೆ ‘ ದೇವ. ’
‘ ಇದು ’ ಅದರ ‘ ಭಾವ.’
‘ ಇದಿರ್ ’ ಉಸುರೆ ‘ ವೇದ. ’
ಮಾತದರ ಭೇದ,
ಇದಿರಿಚ್ಛೆ ದೈವ.
ಗೆಲುವೇ ಸದೈವ.
ಇಲ್ಲಿಲ್ಲವಾದ
ಆ ಸುಸಂವಾದ
ಸಪ್ರೀತಿಗೀತ
ನಿರ್ಭೀತಿನೀತ.

———.—

# ಮೋಡ

ಬೆವತಿತ್ತು ಮೈ ಎಂದು ಕಣ್ಣನೆತ್ತಿದೆ ಮೇಲೆ
ಅದೊ, ಅಲ್ಲಿ ಮುಖದಾಕಾರ ಮೋಡ ಮೂಡಿದೆ ಒಂದು.
ತಲೆಕೆದರಿಕೊಂಡಿದೆ, ಟಗರುಗೂದಲು, ರೀತಿ
ಶುದ್ಧ ರಾಂಗಿಗನಂತೆ, ಬಾನು ಕಾಳಗ ಬಯಲು–
ಆನೆದಲೆ, ಸರ್ಪಮುಖ, ಲಂಬಕರ್ಣನ ತಂದೆ,
ಅಮ್ಮಮ್ಮ ಮಾಮಾಯಿ ಲಂಗ ಹಾರುತ್ತಲಿದೆ–
ಯಾರದೀ ದಂಡು ಏತಕ್ಕಾಗಿ ಕೂಡಿದೆ ಇಂದು ?
ಪ್ರಳಯಪೂರ್ವದ ರೌದ್ರ, ಸದ್ದಿಲ್ಲದೀ ಸಂಚು
ಯುದ್ಧ ಬಡಕರ ಶುದ್ಧ ಶಾಂತತಾವಾದದೊಲು
ಪರಿಣಾಮ ಬೇಸುರವಲಾ ! ಈ ಮಹಾಕೂಟ–
ನೋಟವೇ ಇಂತಿರಲು ಆಟ ಎಂತದೊ ಮುಂದೆ.
ಮಜ್ಜಿಗೆಯ ಮೇಲ್ ತೇಲಿ ಬೆಣ್ಣೆಯಂತೆ ಸಲೀಲ—
ಕಣ್ಮಿಂಚಿ ಕರೆಯುತಿದೆ ಓಹೊ ಘನ ಘನ ನೀಲ !

——— ———

# ಮಿಂಚು

ಬಾನ ಬರಸಿಡಿಲಲ್ಲ ಕೆಮ್ಮಿಂಚು ಹೊಮ್ಮಿಂಚು
ಅಬ್ಬ ! ವಜ್ರದ ಮಿಂಚು, ನೇತ್ರಪಲ್ಲವಿಯ ಈ
ತಂತ್ರ ಬಲ್ಲವರಾರು ? ಏನೇನೊ ಬರೆಬರೆದು
ಮತ್ತೆ ಅಳಿಸಿದ ಹಾಗೆ ಮಾಯವಾಗುತ್ತಲಿದೆ
ತತ್‌ಕ್ಷಣಕೆ ಕಾಣದಾಗುವ ಈ ನಿರೀಕ್ಷಣದ
ವೇಗದಲಿ ಆವ ಸಂದೇಶವಿದೆ ? ಹಾ ! ಮೂಢ
ಮೇಘನಾದನ ಹೆಗಲ ಅಪ್ಸರೆಯಪಾಂಗದೀ
ಪಾಂಗು ಗಗನಾಂಗನೆಯ ಪ್ರಾಯದ ಅಭಿಪ್ರಾಯ !
ನೀರ ಉಗೆ ಹೊಗೆಯಲ್ಲಿ ಬೆಂಕಿ ಅಡಗಿರಬಹುದೆ ?

—•— —— —— ——

# ಕಿಡಿ

ಸಾಕು ಒಂದು ಮೊಗ್ಗು ಕಿಡಿ
ವಿಶ್ವಕದುವೆ ಹಿಗ್ಗು ಗುಡಿ.
ಕಡಲುತೆರೆಯ ಕನ್ನಡಿ.
ಬೊಗಸೆ ತುಂಬ ಬಾನು.
ಅದರೊಳಿದ್ದೆ ನಾನು.
ಅಲ್ಲಿ ಇದ್ದೆ ನೀನು.
ಕೋಟಿ ಕೋಟಿ ಕೋಟಿ ಮೀನು
ಉಪ್ಪುನೀರು ಕೊರತೆಯೇನು.
ಪುಟ್ಟಬಾಯಿ ಪುಟ್ಟ ತುಟಿ
ಪುಟ್ಟಬಾಲ, ಪುಟಪುಟಿ
ಒಲಿತ, ಅಲೆತ, ನಲಿತವೊ !
ಎಲ್ಲಿ ಇದನು ಕಲಿತವೊ ?
ಒಹೋ ಇಲ್ಲಿ ಹುಟ್ಟುಗಣ್ಣು.
ನಿದ್ರೆ ಇದನು ಮುಚ್ಚದು.
ಇದುವು ಹೊಸತು ಹೊಚ್ಚದು.
ಈ ಕರಾಳ ಆಳದಲ್ಲಿ
ಪ್ರಳಯದೀ ಪಯೋಧಿಯಲ್ಲಿ
ಏನ ಕಂಡು ಬಾಳಿತೋ
ಯಾವ ಬದುಕನಾಳಿತೋ
ದೂರದಾ ದಿಗಂತದಲ್ಲಿ
ಎಂಥ ಚುಕ್ಕೆ ಕಂಡಿತೋ !

---

# ಪಾರ್ವತಿ ನೀನೇ ಸಲಹು

ಈಶ್ವರ ನಿರ್ಮಿಸಿದೀ ಸೃಷ್ಟಿಯನು
ಪಾರ್ವತಿ! ನೀನೇ ಸಲಹು.
ನಿನ್ನದೆ ಈ ನೆಲ, ನಿನ್ನದೆ ಈ ಜಲ
ನಿನ್ನದೆ ಕನ್ನಡ ಗೆಲಹು.

ಒಲಿವ ಲಿಂಗವೇ ಚೆಲುವ ಲಿಂಗವೇ
ನಲಿವ ಲಿಂಗವೇ ನೀ ತಾಯಿ.
ಕನ್ನಡ ಬೀಜವ ಹೂವಾಗಿಸಿದೆ
ಹಣ್ಣಾಗುವವರ ನೀ ಕಾಯಿ.

ಪಾರ್ವರ ಪಾರಿಕೆ ತ್ರಿನೇತ್ರಶಿಖಿಯೊಲು
ಉತ್ತರೋತ್ತರವು ಮೇಲು ಮುಖ.
ಪ್ರತಾಪವಿಲ್ಲದ ತಾಪ ಬೆಳೆಸುವಾ
ಹುಸಿ ತಪಸ್ಸಿನಲಿ ಏನು ಸುಖ?

ಬಡಗಣ ತೆಂಕಣ ಪಡುವಣ ಮೂಡಣ
ನಡುವಣ ಕನ್ನಡ ಪಂಚಶಿಖ.
ಪರಮೇಶ್ವರನೊಲು ಪ್ರಪಂಚ ಪ್ರಕಟಿಸಿ
ಮೈದೋರಿತು ಇಗೊ ಪಂಚಮುಖ.

ಜೈನರ ಕಾವ್ಯದ ಶರಣರ ವಚನದ
ದಾಸರ ಹಾಡಿನದೀ ನಾಡು.
ವಿಶ್ವದ ಕಬ್ಬದ ಹಬ್ಬಹುಣ್ಣಿವೆಗೆ
ಕನ್ನಡ ಹೃದಯವ ಹದ ಮಾಡು.

ಹಾಡಿಗೆ ತಕ್ಕಾ ರಾಗವು ಬೇಕು
ರಾಗಕೆ ತಕ್ಕಾ ಅನುರಾಗ.
ಹೇಳುವವರಲೂ ಕೇಳುವವರಲೂ
ರಸಪರಿಣಾಮದ ಸಮಯೋಗ.

ಕರ್ನಾಟಕವನು ಕಡೆದರು, ಹೊರಟಿತು
ಕನ್ನಡವೆನ್ನುವ ನವನೀತ.
ಹೃದಯದ ಮರ್ಮವ ಮಿಡಿದರೆ ಬರುವೊಲು
ನಾದದಿಂದ ಅನುಭವಗೀತ.

ಕನ್ನಡ ನುಡಿದಿತು ಕನ್ನಡ ಹಕ್ಕಿ.
ಕನ್ನಡವೆಂದಿತು ಆಗೋದೆ.
ಕಾವೇರಿಯು ತಂಪಾಯಿತು, ಕನ್ನಡ
ಗಾಳಿಯು ಉಸಿರಿತು ಈ ಬೋಧೆ:

ಜಿನ ಹರಿ ಅಲ್ಲಾ ಶಿವನೇ ಬಲ್ಲಾ
ಒಬ್ಬನಲ್ಲದೇ ಎರಡಿಲ್ಲಾ !
ಜೀವದೇವನೊಂದಾವಣಿ ಇಲ್ಲದ
ನೀರಿಲ್ಲದ ನೆಲ ಬರಡಲ್ಲಾ ?

ಅರ್ಪಣವಿಲ್ಲದೆ ಪ್ರಸಾದವಿಲ್ಲಾ.
ತರ್ಪಣವಿಲ್ಲದೆ ಶ್ರಾದ್ಧ ಗಡಾ?
ದರ್ಪಣವಿಲ್ಲದ ದರ್ಶನವಿಲ್ಲಾ
ಯೋಗದ ತೇರಿಗೆ ಶ್ರದ್ಧೆ ಬುಡ !

ಈಶ್ವರನೊಲುಮೆಗೆ ಶ್ರದ್ಧೆಯೆ ಮೂಲ,
ಅವನೊಡಗೂಡಲು ಶಕ್ತಿ ಬಲ.
ಆತ್ಮದಿ ಶ್ರದ್ಧೆಯು ಪ್ರಸಾದ ಪಡೆಯಲು
ಬೇಕಾಗಿರುವದು ವೀರಭಲ.

ಅಶಿವವು ಎಂಬುದು ಬಾಳುವೆ ಅಲ್ಲ.
ಅಶಕ್ತವೆಂಬುದು ಬದುಕಲ್ಲ.
ಅನೀಶವೆಂಬುದು ರಾಜ್ಯವೆ ಅಲ್ಲ.
ಅಭಕ್ತವಾದರೆ ಇರಸಲ್ಲ.

ಅನೇಕಾಂಗವಿದೆ ಐಕ್ಯದ ಕೀಲ
ಅನೈಕ್ಯವಾದರೆ ಒಂದಲ್ಲ.
'ನಾ' 'ನಾ' ಎನ್ನುತ ನಾನಾ ತೆರದಲಿ
ವಿಭಕ್ತವಾದರೆ ಚೆಂದಲ್ಲ.

ಬಾಂಧವ್ಯವು ಇದು ಬಂಧನವಾದರೆ
ಮುಕ್ತ ಜೀವನಕೆ ತೆರವಿಲ್ಲ.
ಸ್ವಭಾವ ಪರಿಪಾಕಕ್ಕಿಂಬಿದ್ದರೆ
ಸಾಮರಸ್ಯಕದು ಎರವಲ್ಲ.

ನಡೆದಷ್ಟಿದೆ ನೆಲ, ಹರಿದಷ್ಟಿದೆ ಜಲ,
ಏರಿದಷ್ಟು ಇದೆ ಹಿರಿಬಯಲು.
ದುಡಿದಷ್ಟಿದೆ ಬಲ, ಪಡೆದಷ್ಟಿದೆ ಫಲ,
ಪಯರಿಗೆ ತಕ್ಕಷ್ಟಿದೆ ಕುಯಿಲು.

ಶಾಂತಿಯಿಂದ ಪರಿಪುಷ್ಟಿಗೊಂಡು ಸಂ-
ತುಷ್ಟವಾಗಲೀ ನಾಡ ಜನ.
**ವಿಜಯ** ಹೊಂದಿ, **ಕಲ್ಯಾಣ** ಪಡೆದು, ಸ್ವ-
ಸ್ವ-ಧರ್ಮ ಕಾಯಲಿ ಚಿರಂತನ.

———

# ಸ್ವಾತಂತ್ರ್ಯದೇವಿಗೆ

ಸ್ವಾತಂತ್ರ್ಯದ ಹುಟ್ಟುಹಬ್ಬ
ಕರೆವುದು ಸಾವಿರದ ಕಬ್ಬ
ಸುರಭಿಯಂತೆ ಇಂದಿಗೂ,
ಅದರ ಪದಕೆ ಗೆಜ್ಜೆ ಬೇಕೆ?
ಅದಕೆ ಬೇರೆ ರಾಗವೇಕೆ?
ಅದೇ ಗೀತವೆಂದಿಗೂ.

ಶಾಂತ ಜಲಧಿಯಂತರಂಗ
ಕಾರಿತಣ್ಣ ಬೆಂಕೆಯ;
ಕೋರಿಯಾದ ಕುರುಕ್ಷೇತ್ರ
ಮುರಿಯಿತಗೋ ಶಂಕೆಯ;
ಮರೆಯಿಸುವದೊ ನೆನೆಯಿಸುವದೊ
ರಾವಣನಾ ಲಂಕೆಯಾ!

ಮಹಾಕಾಳಿ ಇಳಿದಳಣ್ಣ
ತನ್ನ ರುದ್ರಲೀಲೆಗೆ,
ಸೋದರರಾ ರಕ್ತ ಕುಡಿಯೆ
ಚಾಚಿ ಒಂದೆ ನಾಲಿಗೆ.
ಬೇರೆ ದೇವಿ ಬರುತಲಿಹಳು
ನೋಡು ಸ್ವಲ್ಪ ಮೇಲಿಗೆ.

ಹಿಗ್ಗಿನೊಂದು ಉರುಳೆಯಂತೆ
ಅವಳ ಮುಖದ ಮಂಡಲ;
ಸಂಜೆಬಂಜೆತನವ ಹರಿಸಿ
ಮೆರೆಯೆ ತುಟಿಯ ತೊಂಡಿಲ;
ಹೆಜ್ಜೆಯಿಟ್ಟ ಅಡಿಅಡಿಯಲಿ
ಅಗೋ ಯಜ್ಞಸ್ಥಂಡಿಲ.

ಮೂರು ಮುಸುಕು ಎಳೆದುಕೊಂಡು
ಮಲಗಿದೇಕೆ ಮಾನವಾ?
ಸುಡಿಸಿ ಸುಟ್ಟು ಕೆಡಿಸಿ ಕೆಟ್ಟು
ಕುಣಿಯುತಿಹನು ದಾನವಾ
ಧೀರೆ ಇಳೆಯ ಸೀರೆ ಸೆಳೆವ;
ಉಳಿಸೊ ಉಳಿಸು ಮಾನವಾ.

ಅದೇ ಅನ್ನ ಅದೇ ನೀರು
ವಿಶ್ವನರನ ಹಸಿವೆಗೆ;
ಬೆಳಕು ಗಾಳಿ ಸುತ್ತು ಒಂದು
ಪ್ರಾಣದ ಒಳ ಅಸುವಿಗೆ;
ಒಂದೆ ಬಯಲು ಬದುಕಲುಂಟು
ವಸುಂಧರೆಯ ಹಸುವಿಗೆ.

ಚುಕ್ಕೆಗಳನು ಮೆಟ್ಟು ಮಾಡಿ
ಬರುತಲಿಹಳು ತಾಯಿಯು.
ಅವಳ ಮಾತ ಕಲಿಯಲೆಂದು
ತೊದಲುತಿಹುದು ಬಾಯಿಯು.
ಅವಳ ಬರವೆ ಕಾಯುತಿಹುದು
ಮರದ ಮರದ ಕಾಯಿಯು.

ಚವಲಂಬವನವಲಂಬಿಸಿ
ನಗೆಯು ಕಣ್ಣಗೊನೆಗಿದೆ;
ಮುತ್ತು ಉರುಳಿ ಹೊರಳಿ ಮರಳಿ
ಬರಲು ತುಟಿಯ ಸನೆಗಿದೆ;
ಮುಕ್ತಿ ಉಯ್ಯಾಲಾಟ ನೋಡು
ಮೂಗ–ಮೂಗತೆನೆಗಿದೆ.

ಏಳೊ ಏಳು ಗೆಳೆಯ, ಕೇಳು
ಕರೆವ ತೂರ್ಯನಾದವ;
ಗೋಳಗುಮುಟದಂತೆ ಸೃಷ್ಟಿ
ನುಡಿಸುವ ಪಡಿಸಾದವ;
ಹೆಜ್ಜೆ ಹಾಕು, ಹಾಡ ಹೇಳು,
ನೀನೆ ನಾಳೆಯಾದವ.

ದೀಪ ದೀಪ ಸಮಸಮೀಪ
ಇದೊ ಭಾರತಹುಣ್ಣಿವೆ;
ಜೀವರಥಕೆ ಪ್ರಾಣದಶ್ವ
ತಾವೆ ತಾವು ಹಣ್ಣಿವೆ
ಎಲ್ಲ ಬೆಳಕು ಎಲ್ಲ ಬಯಲು
ಮಣ್ಣ ಕಣಕು ಕಣ್ಣಿವೆ.

ಪ್ರೀತಿ ದೂತಿಯಾಗಿ ಬಂದು
ಕರೆಯುತಿಹಳು ಯಾತ್ರೆಗೆ,
ಎದೆಎದೆಗೂ ಹಬ್ಬವಾಗೆ
ದೇವಿ ದೇವ ಜಾತ್ರೆಗೆ;
ಬಾಳಿರಣ್ಣ ಆಳಿರಣ್ಣ
ಬೆಳಗು ಉಂಟು ರಾತ್ರಿಗೆ.

ಬಾರೆ ತಾಯಿ, ಬಾರೆ ದೇವಿ,
ಓಗರೆವರು ಭಕ್ತರು;
ನಿನ್ನ ಮಕ್ಕಳೆಂದು ನಿನಗೆ
ಒಲಿವ ಜ್ಞಾನ ಶಕ್ತರು;
ನಿನ್ನ ಮನೆಯ ಕಟ್ಟಲಿಹರು
ದಿವ್ಯ ಕರ್ಮಯುಕ್ತರು.

ನುಗ್ಗಿರಣ್ಣ ರಣದ ಕಣಕೆ,
ಅಸುರರಿಂದ ಬಿಡಿಸಿರಿ
ತಾಯ ಸೆರೆಯ, ಎಲ್ಲರಿಂದ
ಗೆಲವಿನ ಗುಡಿ ಹಿಡಿಸಿರಿ.
ಭೂಮಿದೇವಿ ನಲಿಯುವಂತೆ
ವಿಜಯಗೀತ ನುಡಿಸಿರಿ.

ಕನ್ನಡವೂ ಕನ್ನಡಿಸಲಿ
ನಾಳೆ ಬಾಳಿನೊಸಗೆಯ;
ಜೀವನ ಕಲೆ ಬೆಳಗಲಲ್ಲಿ
ತಿಳಿದು ಕರಣ ಹಸುಗೆಯ;
ಪೂರ್ಣಪ್ರಜ್ಞರಾಗಿ ಪಡಲಿ
ಜೀವ-ದೇವ ಬೆಸುಗೆಯ.

---

# ಕಣಸು

ಸಿಂಹ ಮುಖಕ್ಕಿದೆ ನವಿಲಿನ ಸೋಗೆ
ಶಕ್ತಿ ಶಾರದೆಯ ಮೇಳದ ಹಾಗೆ !
ನಾಗಮೋಡಿಯಲಿ ನಡೆದಿದೆ ನಾಡಿ
ತಮ ಹಿಂದೂಡಿ, ಪ್ರಕಾಶಕೋಡಿ
ಬಾನ ಕೆದರುತಿದೆ ಕಣ್ಣಿನ ಕದಿರು.
ಅಪಾರ ಅಪಾರ ಸಪಾರದಿದಿರು !

ಸಿಂಹ–ಮಯೂರ ! ಯಾವದು ಮೋಡಿ ?
ಶಕ್ತಿ–ಸ್ಕಂದ ! ಏನನು ನೋಡಿ ?
ಆವ ರಣಕ್ಕಿದು ? ಏನಿದು ಜೋಡಿ ?

ಮಯೂರ ಮಯೂರ ಬಾನೇ ಹಕ್ಕಿ
ಸಿಂಹ ಜಿಷ್ಣುಯಲಿ ಗಲ್ಲವ ನೆಕ್ಕಿ
ಕಾನ–ನಾಗನೊಲು ತಾನೆಕ್ಕೆಕ್ಕಿ
ಎಲ್ಲಿಂದೆಲ್ಲಿಗೆ ಹೊರಟದೆ ಏನೋ !
ಜಗಪ್ರವಾಸದ ಖಗಪ್ರಯಾಣ
ಗುಹ್ಯಾತ್ ಗುಹ್ಯತರಂ ಈ ಯಾಣ !
ಆನರಿಯುವೆನೇ ಈ ಬಿನ್ನಾಣ ?
ತಾಯಿ ! ಸಲಹು ನೀ ನಿನ್ನದೆ ಪ್ರಾಣ.

———

# ಕವನಗಳ ಪ್ರಥಮ ಚರಣಗಳ ಅಕ್ಷರಾನುಕ್ರಮಣಿಕೆ

---

# ಒಪ್ಪೋಲೆ

| ಪುಟ | ಚರಣ | ತಪ್ಪು | ಒಪ್ಪು |
|---|---|---|---|
| ೨ | ಪ್ರತಿಪದ್ಯ ಕೊನೆಗೆ | ಸ್ವಾತಂತ್ರ್ಯಽಪಡೆಯುವದಣ್ಣಾಽ ಎಂಬ ಚರಣ ಓದಿಕೊಳ್ಳಬೇಕು. | |
| ೭ | ೫ | ಇದು | ಇದ |
| ೭ | ೧೬ | ವಿ–ಚಿತ್ರ | ವೈ–ಚಿತ್ರ್ಯ |
| ೧೪ | ೧೩ | ದಾಂತ | ಅತಿದಾಂತ |
| ೧೯ | ೧ | ಕಿರಿಬೆಳ್ಳಿನಾ | ಕಿರಿಬಳ್ಳಿನಾ |
| ೨೨ | ೧೪ | ಕೂಡಿ | ಕುಡಿ |
| ೨೨ | ೧೭ | ಆಯುದಯ | ಆಯ್ತುದಯ |
| ೨೬ | ೨ | ಅಷ್ಟಕೋಣ | ಅಷ್ಟೈಕೋಣ |
| ೨೬ | ೧೫ | ಮುತ್ತಯ್ದ | ಮುತ್ತಯ್ಯ |
| ೨೮ | ೯ | ಕುಸು | ಕೂಸು |
| ೫೧ | ೯ | ಲಟಪಟ | ಲಟಪಿಟ |
| ೬೬ | ೪ | ಎಲ್ಲಾನು | ಎಲ್ಲಾಽನುಽ |
| ೬೬ | ೬ | ಎತ್ತಾನು | ಎತ್ತಾಽನುಽ |
| ೬೭ | ೬ | ಅಂತ | ಅನ್ನತಽ |
| ೬೭ | ೯ | ಹತದಿ | ಹಡದಿ |
| ೬೮ | ೪ | ಕೇಳಿರುವೆಯಾ | ಹೇಳಿರುವೆಯಾ |
| ೬೯ | ೧೮ | ಅಸ್ಮಿತೆಯ | ಅಸ್ಮಿತೆಯು |
| ೭೪ | ೩ | ಪರಬ್ರುಹ | ಪರಬ್ರಹ್ಮ |
| ೭೫ | ೬ | ಕುದುಕಿ | ಕದುಕಿ |
| ೮೨ | ೭ | ನೆರೆವಾಗಿ | ನೆರವಾಗಿ |
| ೯೬ | ೨ | ಬುದ್ಧ | ಬುದ್ಧ |
| ೧೦೦ | ೬ | ಲಕ್ಷ್ಮೀಪತಿ | ಲಕ್ಷ್ಮೀಪತಿ |

| | | | |
|---|---|---|---|
| ೧೦೨ | ೫ | ವಿಣೆಗಾ | ವೀಣೆಗಾ |
| ೧೦೨ | ೧೧ | ಒಲದೀಯೆ | ಒಲಿದೀಯೆ |
| ೧೦೨ | ೧೨ | ಇರುವ | ಇರುವಂಥ |
| ೧೦೯ | ೯ | ಸಪ್ರೀತಿ | ಸುಪ್ರೀತಿ |
| ೧೦೯ | ೧೦ | ನಿರ್ಭೀತಿನೀತ | ನಿರ್ಭೀತನೀತ |
| ೧೧೪ | ೧೮ | ಆಗೋದೆ | ಆ ಗೋದೆ |
| ೧೨೧ | ೧೧ | ಜಿಪ್ವೆ | ಜಿಹ್ವೆ |

ಅಸ್ಮಿತೆ Emerson ರ ಕವನದ ಛಾಯೆ.



